ಕಾಯಕವೇ ಕೈಲಾಸ



# ಸಿದ್ಧಗಂಗಾ



ಮಹಾಶಿವರಾತ್ರಿ ಹಬ್ಬದ ಶುಭಾಶಯಗಳು

ಸಂಪುಟ : ೫೬ ಫೆಬ್ರವರಿ ೨೦೨೦ ಸಂಚಿಕೆ : ೦೨




ಪರಮಪೂಜ್ಯರಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಶಿವಾನುಭವ ಚರಮೂರ್ತಿ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು ಹಾಗೂ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ, ಗಣ್ಯರ ಉಪಸ್ಥಿತಿಯಲ್ಲಿ ಸಮಾರಂಭವನ್ನು ಭಾರತೀಯ ಜನತಾಪಕ್ಷದ ಯುವ ಘಟಕದ ಪ್ರಧಾನ ಕಾರ್ಯದರ್ಶಿ ಶ್ರೀ ಬಿ.ವೈ. ವಿಜಯೇಂದ್ರ ಅವರು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉಗ್ರ ನಿಗ್ರಹದಳದ ಅಧ್ಯಕ್ಷರಾದ ಶ್ರೀ ಮಣೀಂದರ್‌ಜೀತ್ ಸಿಂಗ್ ಬಿಟ್ಟ, ಕೈಗಾರಿಕೋದ್ಯಮಿ ಶ್ರೀ ಮುಖೇಶ್ ಗರ್ಗ್ ಹಾಗೂ ಬಿ.ಜಿ.ಎಸ್. ಆಸ್ಪತ್ರೆಯ ಅಧ್ಯಕ್ಷರಾದ ಡಾ. ರವೀಂದ್ರನಾಥ್ ಅವರನ್ನು ಸನ್ಮಾನಿಸಿ ಆಶೀರ್ವದಿಸಿದರು.



ಶ್ರೇಷ್ಠ ಸಂಶೋಧಕ, ಕನ್ನಡದ ಸೇನಾನಿ
ಡಾ. ಎಂ. ಚಿದಾನಂದಮೂರ್ತಿ
(೧೯೩೧-೨೦೨೦)









## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ


ಸಂಪುಟ : ೫೬ ಫೆಬ್ರವರಿ ೨೦೨೦ ಸಂಚಿಕೆ : ೦೨

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಎಸ್. ಉಮಾಮಹೇಶ್, ಕೆ.ಬಿ. ಶಿವಶಂಕರಯ್ಯ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.

email: siddaganganews@gmail.com


## ಒಳಪುಟಗಳಲ್ಲಿ ..................


೨ ಸಂಪಾದಕೀಯ

೩ ಶ್ರೀವಾಣಿ

೪ ಸಿದ್ಧಲಿಂಗೇಶ್ವರ ವಚನ –
ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

೫ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ
ಪ್ರಥಮ ಪುಣ್ಯಸಂಸ್ಮರಣೋತ್ಸವ – ಒಂದು ವರದಿ

೧೧ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾಮಹೋತ್ಸವ ಆಹ್ವಾನ ಪತ್ರಿಕೆ

೧೨ ಸಿದ್ಧಗಂಗಾ ಮಠದಲ್ಲಿ ಅಮೃತವಾಹಿನಿ (ಕವನ)
– ಜರಗನಹಳ್ಳಿ ಶಿವಶಂಕರ್

೧೩ ಸಿದ್ಧಗಂಗೆಯ ಮಹಾಮಾನವತಾವಾದಿ – ನಗರ್ಲೆ ಶಿವಕುಮಾರ

೧೬ ಕರ್ಮಸುಜ್ಞಾನ ಶಿವಯೋಗಿ
ಶಾಸನೋಕ್ತ ಪರಮಾರಾಧ್ಯ ಸಿದ್ಧರಾಮ – ಡಾ. ಎಂ.ಜಿ. ನಾಗರಾಜ್

೧೯ ಶ್ರೇಷ್ಠ ಸಂಶೋಧಕ, ಕನ್ನಡದ ಸೇನಾನಿ, ಕನ್ನಡ ಜಂಗಮ
ಡಾ. ಎಂ. ಚಿದಾನಂದಮೂರ್ತಿಯವರು – ಎಚ್.ಎಸ್. ಸಿದ್ಧಗಂಗಪ್ಪ

೨೫ ಪುರುಷಸೂಕ್ತಕ್ಕೊಂದು ನಿರಂಜನಜಂಗಮಭಾಷ್ಯ
– ಕೋ.ರಂ. ಬಸವರಾಜು

೨೮ ಪಂಡಿತ ಚೆನ್ನಪ್ಪ ಎರೇಸೀಮೆಯವರ ಬದುಕು-ಬರಹ ಕುರಿತ
ಒಂದು ದಿನದ ವಿಚಾರ ಸಂಕಿರಣ – ಒಂದು ವರದಿ

೩೦ ಕರ್ನಾಟಕ ವಾರ್ತೆ – ಜಾಹಿರಾತು



ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00





# ಪ್ರಧಾನ ಸಂಪಾದಕರ ನುಡಿ........

ದಿನಾಂಕ 11-01-2020ರಂದು ಡಾ. ಎಂ. ಚಿದಾನಂದಮೂರ್ತಿಯವರು ಶಿವಾಧೀನರಾದದ್ದು ಕನ್ನಡ ವಿದ್ವದ್ ಲೋಕಕ್ಕೆ ಆದ ತುಂಬಲಾರದ ನಷ್ಟ.

ಶಿವಮೊಗ್ಗ ಜಿಲ್ಲೆ ಚನ್ನಗಿರಿ ತಾಲ್ಲೂಕು ಹಿರೇಕೊಂಗಲೂರಿನಲ್ಲಿ ಶ್ರೀ ಕೊಟ್ಟೂರಯ್ಯ ಮತ್ತು ಶ್ರೀಮತಿ ಪಾರ್ವತಮ್ಮ ದಂಪತಿಗಳ ಸುಪುತ್ರರಾಗಿ 1931ಮೇ 10ರಂದು ಜನಿಸಿದ ಡಾ. ಚಿ.ಮೂ. ಅವರ ದಾವಣಗೆರೆಯಲ್ಲಿ ಪ್ರೌಢಶಾಲೆ - ಇಂಟರ್‌ಮೀಡಿಯೇಟ್ ವಿದ್ಯಾಭ್ಯಾಸ ಮಾಡಿ 1950ರಲ್ಲಿ ಮುಗಿಸಿ, 1953ರಲ್ಲಿ ಅಧ್ಯಾಪಕರಾಗಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇವೆಯಲ್ಲಿ ಪ್ರಾರಂಭಿಸಿ 1964ರಲ್ಲಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಎಂಬ ಪ್ರೌಢ ನಿಬಂಧಕ್ಕೆ ಪಿಎಚ್.ಡಿ. ಪದವಿ ಪಡೆದು, 1967-68ರಲ್ಲಿ ಚಿಕಾಗೋ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿದ್ದುಕೊಂಡು ಭಾಷಾವಿಜ್ಞಾನದಲ್ಲಿ ಪೋಸ್ಟ್ ಡಾಕ್ಟರೇಟ್ ಅಧ್ಯಯನ ನಡೆಸಿದರು. 1979ರಲ್ಲಿ ಮತ್ತೆ ಅಮೇರಿಕೆಗೆ ಭೇಟಿ ನೀಡಿ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾನಿಲಯದಲ್ಲಿ 4ನೇ ಅಂತರಾಷ್ಟ್ರೀಯ ಐತಿಹಾಸಿಕ ಭಾಷಾವಿಜ್ಞಾನಕ್ಕೆ ಸಮ್ಮೇಳನ ಗೋಷ್ಠಿಯ ಅಧ್ಯಕ್ಷತೆ ವಹಿಸಿದರು.

1953ರ ನಂತರ ಪದವಿಕಾಲೇಜುಗಳಲ್ಲಿ ಕನ್ನಡ ಉಪನ್ಯಾಸಕರಾಗಿ, 1960ರಲ್ಲಿ ಮಾನಸಗಂಗೋತ್ರಿಯಲ್ಲಿ ಉಪನ್ಯಾಸಕರಾಗಿ, 1968ರಲ್ಲಿ ಉಪಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ 1990ರಲ್ಲಿ ನಿವೃತ್ತಿಯಾದರು.

ಶೂನ್ಯ ಸಂಪಾದನೆಯನ್ನು ಕುರಿತು, ಭಾಷಾ ವಿಜ್ಞಾನದ ಮೂಲಕ ತತ್ವಗಳು, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಂಶೋಧನ ತರಂಗ, ಸಂಶೋಧನೆ, ವಚನ ಸಾಹಿತ್ಯ, ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು, ಗ್ರಾಮೀಣ, ಅಧ್ಯಯನ(ಸಂ), ವಾಗರ್ಥ, ಪುಣ್ಯಸೂರ್‍ಗ್ರಹಣ, ಛಂದೋತರಂಗ, ಹಗರಣ ಮತ್ತು ಇತರ ಪ್ರಬಂಧಗಳು ಶರಣ ಸಾಹಿತ್ಯ ಮತ್ತು ಶಾಸನಗಳಲ್ಲಿ ಸಂಗೀತ ವಿಚಾರ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಲಿಂಗಾಯತ ಅಧ್ಯಯನಗಳು, ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ. ಕರ್ನಾಟಕ ಸಂಸ್ಕೃತಿ, ವಚನಶೋಧ, ಹೊಸತು ಹೊಸತು, ಕನ್ನಡಾಯಣ, ಪಾಂಡಿತ್ಯರಸ, ವೀರಶೈವ ಧರ್ಮ ಮತ್ತು ಭಾರತೀಯ ಸಂಸ್ಕೃತಿ, ಬಸವಣ್ಣನವರು, ಬಸವಣ್ಣ(ಆಂಗ್ಲ) ಶ್ರೀಕಂಠ ತೀರ್ಥ (ಸಂ), ಭೂಷಣ(ಸ). ಗೋವು, ಗೋಮಾತೆ, ಗೋಹತ್ಯಾ ನಿಷೇಧ ಕಾನೂನು, ಕರ್ನಾಟಕ ನಾಡಗೀತೆ ಒಂದು ವಿಶ್ಲೇಷಣೆ ಶ್ರೀಮೂರ್ತಿಯವರ ಕೃತಿಸಿರಿಗಳು.

ಡಾ. ಮೂರ್ತಿಯವರಿಗೆ ಸಂದ ಪ್ರಶಸ್ತಿಗಳು ಗೌರವ ಡಾಕ್ಟರೇಟ್ ಬೆಂಗಳೂರು ವಿಶ್ವವಿದ್ಯಾನಿಲಯ, ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ, ಪಂಪ ಪ್ರಶಸ್ತಿ, ನಾಡೋಜ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತು, ವಜ್ರಮಹೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ಮಾಳವಾಡ ಪ್ರಶಸ್ತಿ, ಪ್ರೊ. ಭೂಸನೂರಮಠ ಪ್ರಶಸ್ತಿ, ಶ್ರೀಕೃಷ್ಣದೇವರಾಯ ಪ್ರಶಸ್ತಿ, ಅನಕೃ ಪ್ರಶಸ್ತಿ, ಕನ್ನಡ ಕುಲತಿಲಕ ಪ್ರಶಸ್ತಿ, ಪ್ರೊ. ಶ್ರೀಕೃಷ್ಣ ಪ್ರಶಸ್ತಿ, ಅರವಿಂದಶ್ರೀ ಪ್ರಶಸ್ತಿ, ಸಿರಿಗನ್ನಡ ರಾಷ್ಟ್ರೀಯ ಸಾಹಿತ್ಯರತ್ನ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ಉಡುಪಿ ಆಳ್ವಾಸ್ ನುಡಿಸಿರಿ ಪ್ರಶಸ್ತಿ, ಡಾ. ಹೆಚ್. ನರಸಿಂಹಯ್ಯ ಪ್ರಶಸ್ತಿ, ಶಂ.ಭಾ. ಜೋಷಿ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ವಿಶ್ವಚೇತನ ಪ್ರಶಸ್ತಿ, ಸುತ್ತೂರುಶ್ರೀ ಶಿವರಾತ್ರೀಶ್ವರ ಪ್ರಶಸ್ತಿ, ಕಾಯಕಪ್ರಶಸ್ತಿ, ಬಸವಶ್ರೀ ಪ್ರಶಸ್ತಿ, Eminent Son of Karnataka ಪ್ರಶಸ್ತಿ 2009, ಇಂಗ್ಲೆಂಡಿನ ಕೇಂಬ್ರಿಡ್ಜ್ International Biographical Center ಪ್ರಶಸ್ತಿ, International Man of the year 1995-97 ರ ಪ್ರಶಸ್ತಿ, ರೋಟರಿ ಕ್ಲಬ್‌ನ ಪ್ರಶಸ್ತಿ, ಬಸವಸಾಹಿತ್ಯ ಪ್ರಶಸ್ತಿ, ವಿಶ್ವಚೇತನ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, 'ಸಿದ್ಧಗಂಗಾಶ್ರೀ' ಪ್ರಶಸ್ತಿಗಳಿಂದ ಪುರಸ್ಕೃತರಾಗಿದ್ದಾರೆ ಡಾ. ಚಿದಾನಂದಮೂರ್ತಿ ಯವರು.

ಡಾ. ಚಿ.ಮೂ. ಯವರ ಆತ್ಮಕ್ಕೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳ ಚಿರಶಾಂತಿಯನ್ನು ಅನುಗ್ರಹಿಸಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಪ್ರಧಾನ ಸಂಪಾದಕರು







# ಶ್ರೀವಾಣಿ



ಮಹಾತತ್ತ್ವಜ್ಞಾನಿ ಅಲ್ಲಮಪ್ರಭುಗಳು 'ನಿನ್ನೊಡವೆಯೆಂಬುದು ಜ್ಞಾನರತ್ನ ವೆಂದಿದ್ದಾರೆ. ಸುಜ್ಞಾನಿಯಾದವರಿಗೆ ನಿಜವಾದ ಆಭರಣವೆಂದರೆ ಭೂಮಿ, ಹೇಮ, ಕಾಮಿನಿಗಳನ್ನು ಧರಿಸುವುದಲ್ಲ. ಜ್ಞಾನಭೂಷಣರಾಗುವುದು ಮುಖ್ಯ. ಸಿದ್ಧಾರ್ಥ ಬುದ್ಧನಾದದ್ದು ಹಾಗೆ ತಾನೆ ? ಒಂದು ಕುರಿಮರಿಯ ಹಿಂಸೆಗೆ ಪ್ರತಿಯಾಗಿ ತಾನು ಬಲಿಯಾಗಲು ಮುಂದೆ ಬಂದ ದಯಾಪರರಾದ ಬುದ್ಧದೇವ ಜಗತಿಗೆ ನೀಡಿದ ಸಂದೇಶ 'ಬುದ್ಧಂ ಶರಣಂ ಗಚ್ಛಾಮಿ, ದಮ್ಮಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ' ಎಂಬುದು. ಧರ್ಮದಲ್ಲಿ ನಡೆ, ಬುದ್ಧನಿಗೆ ಶರಣೆಂದು ನಡೆ, ಸಂಘದೊಡನೆ ನೆನೆಯೆಂಬುದು. ಧರ್ಮದ ಅವನತಿಯಾಗದಿರಬೇಕಾದರೆ ಸುಜ್ಞಾನಿಗಳಾಗಬೇಕು.

ಸಿದ್ಧಾರ್ಥ ಶಿಕ್ಷಣಸಂಸ್ಥೆಯನ್ನು ಸ್ಥಾಪಿಸಿ ವಿದ್ಯಾಪ್ರಸಾರಕ್ಕೆ ಜ್ಞಾನಪ್ರಸಾರಕ್ಕೆ ಅವಕಾಶ ಕಲ್ಪಿಸುವುದರ ಮೂಲಕ ಸಾರ್ಥಕ ಜೀವನಪಥಗಾಮಿಗಳಾದ ದಿವಂಗತ ಹೆಚ್.ಎಂ. ಗಂಗಾಧರಯ್ಯ- ಗೊಲ್ಲಹಳ್ಳಿಯವರು. ಒಬ್ಬ ಚಿತ್ರಕಲಾ ಶಿಕ್ಷಕರಾಗಿ ಜೀವನವನ್ನು ಪ್ರಾರಂಭಿಸಿದವರು. ಶಿಕ್ಷಣಸಂಸ್ಥೆಗಳನ್ನು ಆರಂಭಿಸಿ ಜ್ಞಾನಪ್ರಕಾರಯಜ್ಞದಲ್ಲಿ ನಿರತರಾದದ್ದು ಸ್ಮರಣೀಯ, ನೂರಕ್ಕೂ ಹೆಚ್ಚು ಶಾಲಾಕಾಲೇಜುಗಳನ್ನು ಸ್ಥಾಪಿಸಿದರು. ಶ್ರೀಮಠದಲ್ಲಿ ಸಿದ್ಧಾರ್ಥ ಅತಿಥಿ ಗೃಹವನ್ನು ನಿರ್ಮಾಣ ಮಾಡಿ ಗುರುಭಕ್ತಿಯನ್ನು ಅರ್ಪಿಸಿದರು. ಸುಯೋಗ್ಯ ಮಕ್ಕಳನ್ನು ಪಡೆದರು. ಡಾ. ಜಿ. ಗುರುಪ್ರಸಾದ್, ರಾಜ್ಯದ ಉಪ ಮುಖ್ಯಮಂತ್ರಿಗಳಾಗಿ ಸೇವೆ ಸಲ್ಲಿಸಿದ ಡಾ. ಜಿ. ಪರಮೇಶ್ವರ್ ಸೇವಾಜೀವಿಗಳಾಗಿ ಬಾಳಪಥಗಾಮಿಗಳಾದವರು.

ದಿವಂಗತ ಹೆಚ್.ಎಂ. ಗಂಗಾಧರಯ್ಯನವರು ಮೆಡಿಕಲ್ ಕಾಲೇಜನ್ನು ಸ್ಥಾಪಿಸುವ ಮೂಲಕ ವೈದ್ಯ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದವರು. ಬಿ.ಇಡಿ. ಕಾಲೇಜುಗಳನ್ನು ಸ್ಥಾಪಿಸಿ ಶಿಕ್ಷಕರಿಗೆ ತರಬೇತು ನೀಡಿದವರು. ಶ್ರೀಯುತರ ಆದರ್ಶ ಜೀವನ ಅನುಕರಣೀಯವಾದುದು.

* * *

ಆರ್ಥಿಕವಾಗಿ ಬಡತನವಿರಬಹುದು. ಅದನ್ನು ಶ್ರಮ ದುಡಿಮೆಯಿಂದ ಅಭಿವೃದ್ಧಿಪಡಿಸಿಕೊಳ್ಳಬಹುದು. ಆದರೆ ಹೃದಯ ದಾರಿದ್ರ್ಯ ಬರಬಾರದು. ದೊಡ್ಡ ಸ್ಥಾನಗಳಲ್ಲಿರುವವರು ದೊಡ್ಡ ದೃಷ್ಟಿಯುಳ್ಳವರಾಗಬೇಕು. ಉದಾತ್ತ ಚಿಂತಕರಾಗಬೇಕು. ಅಧಿಕಾರ, ಅಂತಸ್ತು, ಅವಕಾಶಗಳು ಬಂದಾಗ ಹಿರಿಯರ ಮಾರ್ಗಾವಲಂಬಿಗಳಾಗಿ ಮುನ್ನಡೆಯ ಬೇಕು.

ಸಾರ್ವಜನಿಕರಿಂದ ಬಂದ ಹಣ ತುಂಬ ಪವಿತ್ರವಾದದ್ದು. ಅದನ್ನು ಖರ್ಚು ಮಾಡುವಲ್ಲಿ ಪೂರ್ವಾಪರ ಚಿಂತನೆ ಮಾಡಲೇಬೇಕಾಗುತ್ತದೆ. ಹಣವನ್ನು ನೀರಿನಂತೆ ಗಳಿಸಬೇಕು. ತೀರ್ಥದಂತೆ ಬಳಸಬೇಕು ಎಂಬ ಅನುಭವವಾಣಿ ಸದಾ ನೆನಪಿನಲ್ಲಿರಬೇಕು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಸದಾಚಾರದಲ್ಲಿ ನಡೆವವನ ಶಿವನಲ್ಲಿ**
**ಭಕ್ತಿಯಾಗಿಪ್ಪವನ ಶಿವಲಾಂಛನವ ಕಂಡಲ್ಲಿ**
**ವಂದನೆಗೈವುತ್ತಿಪ್ಪವನ ಲಿಂಗ**
**ಜಂಗಮವನೊಂದೇ ಭಾವದಲ್ಲಿ ಕಂಡು,**
**ಭೃತ್ಯಾಚಾರ ಸದಾಚಾರಯುಕ್ತವಾಗಿರಬಲ್ಲಡೆ,**
**ಭಕ್ತಿಸ್ಥಲವಿದೆಂಬೆನಯ್ಯಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಸದಾಚಾರದಲ್ಲಿ ನಡೆವವನು – ಎಲ್ಲಾ ಭಕ್ತಮಹೇಶ್ವರರುಗಳು ಅಹುದಹುದೆಂಬುವ ಹಾಂಗೆ ಆಚರಿಸುವಂಥಾದೆ ಸದಾಚಾರ. ಅಂತಪ್ಪ ಸತ್ಪಥಾಚಾರದಲ್ಲಿ ಆಚರಿಸುವಂಥಾತನು. ಶಿವನಲ್ಲಿ ಭಕ್ತಿಯಾಗಿಪ್ಪವನ: ಶಿವನಲ್ಲಿ – ಲಿಂಗದಲ್ಲಿ, ಭಕ್ತಿಯಾಗಿಪ್ಪವನ – ಶ್ರದ್ಧೆಯಾಗಿರುವಂಥವನ. ಶಿವಲಾಂಛನವ ಕಂಡಲ್ಲಿ ವಂದನೆ ಗೈವುತ್ತಿರ್ಪವನ: ಶಿವಲಾಂಛನವ – ಶಿವಲಾಂಛನ ಸ್ವರೂಪವಾದ ಜಂಗಮಮೂರ್ತಿಗಳನು, ಕಂಡಲ್ಲಿ – ನೋಡಿದಲ್ಲಿ, ವಂದನೆಗೈವುತ್ತಿರ್ಪವನ – ನಮಸ್ಕರಿಸುವಂಥವನ, ಲಿಂಗ ಜಂಗಮವನೊಂದೇ ಭಾವದಲ್ಲಿ – ಒಂದೇ ಶಿವಭಾವದಲ್ಲಿ, ಕಂಡು – ನೋಡಿ, ಭೃತ್ಯಾಚಾರ – ಗುರುಲಿಂಗ ಜಂಗಮವೆ ಕರ್ತೃ ತಾನೆ ಭೃತ್ಯನಾಗಿರುವಂಥಾದೆ ಭೃತ್ಯಾಚಾರವು. ಸದಾಚಾರಯುಕ್ತ ವಾಗಿರಬಲ್ಲಡೆ – ಸತ್ಪಥಾಚಾರದಲ್ಲಿ ಕೂಡಿರಬಲ್ಲಡೆ, ಭಕ್ತನಸ್ಥಲ ವಿಂದೆಂದೆನಯ್ಯಾ – ಭಕ್ತಿಸ್ಥಲದಾಚರಣೆಯಿದೆಂದು ಹೇಳುವೆನಯ್ಯಾ, ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಹೆಣ್ಣುಮಕ್ಕಳ ಬಾಳು ಅರಳುಮಲ್ಲಿಗೆ ನೋಡು
ಸಣ್ಣದರಿಂದ ಸರಿಮಾಡು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾವುಮಲ್ಲಿಗೆ ಬೇಕು ಬೇವು ಬೆಲ್ಲ ಬೇಕು
ನೋವು ನಲಿವಿರಬೇಕು ಬದುಕಿಗೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಒಳಹೊರಗೆ ತಿಳಿಬೆಳಕು ಚೆಲ್ಲಿರಲು ಮಾತಿನಲಿ
ದೇಗುಲದ ಘಂಟೆಯದು ತಾನೇಕೆ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೊಂದ ಜೀವಿಯ ಜೊತೆಗೆ ಒಂದೆರೆಡು ಮಾತಾಡು
ಬೆಂದ ಬದುಕಿನ ಜೊತೆಗೆ ಬೆರೆ ನೀನು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪೂಜೆಪ್ರಾರ್ಥನೆಗಳು ಮನದ ವಿಕಾಸಕೆ
ಸಾಜ ಸಾಯುಜ್ಯಕೆ ಸೋಪಾನ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತನುವೆ ಧೂಪದ ಕುಂಡ ಮನವೆ ಪಂಚಾರತಿ
ಅನುದಿನ ಬೆಳಗುವೆ ನನ್ನಸ್ವಾಮಿ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ತವ ಪಾದೋದಕ ಪುಣ್ಯನದಿಗಳಸಾರ
ಅರಿವಿನ ಕಾರುಣ್ಯ ಭರಪೂರ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಮಪ್ರಸಾದದಲಿ ಶಿವತಾನೆ ಮನೆಮಾಡಿ
ಮನದಿ ಮಲ್ಲಿಗೆಯಾಗಿ ಅರಳುವನು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಂದ್ರಪದವಿಯದೇನು ಚಂದ್ರಪದವಿಯದೇನು
ಸಾಂದ್ರ ಸುಂದರ ಪದವಿ ತವಪಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



ವರದಿ

# ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪ್ರಥಮ ಪುಣ್ಯಸಂಸ್ಮರಣೋತ್ಸವ

ಶ್ರೀಮಠದಲ್ಲಿ ಯಾವುದೇ ಕಾರ್ಯಕ್ರಮ ನಡೆಯಲಿ ವೀಳ್ಯೆಕೊಟ್ಟು ಆಹ್ವಾನಿಸಬೇಕಿಲ್ಲ. ವಿಷಯ ತಿಳಿದರೆ ಸಾಕು, ಭಕ್ತರು, ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿ ಧನ್ಯತೆಯನ್ನು ಪಡೆಯುತ್ತಾರೆ. ಇದು ಅವರೆಲ್ಲ ಶ್ರೀಮಠದ ಬಗ್ಗೆ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಇಟ್ಟಿರುವ ಭಕ್ತಿ, ಗೌರವ, ಪ್ರೀತಿಯ ದ್ಯೋತಕ. ಮಠಕ್ಕೂ ಅವರಿಗೂ ಇರುವ ಅವಿನಾಭಾವ ಸಂಬಂಧ. ಪರಮಪೂಜ್ಯ ಶ್ರೀ ಶ್ರೀಗಳವರು ಲಕ್ಷೋಪಲಕ್ಷ ಮಕ್ಕಳ ಹೃದಯದಲ್ಲಿ ಹಚ್ಚಿದ ಜ್ಞಾನದ ಜ್ಯೋತಿ ಉತ್ತಮ ನಾಗರಿಕರನ್ನಾಗಿ ಮಾಡಿ ಸ್ವಾಭಿಮಾನದಿಂದ ಬದುಕುವಂತೆ ಮಾಡಿದೆ. ಅವರಿಗೆಲ್ಲ ಪೂಜ್ಯ ಶ್ರೀಗಳವರ ಪ್ರತಿನಿತ್ಯ, ಪ್ರತಿಕ್ಷಣ ಮಾಡುವ ನಾಮಸ್ಮರಣೆ, ದಿವ್ಯಮಂತ್ರವಾಗಿ ಪುನೀತರನ್ನಾಗಿ ಮಾಡುತ್ತಿದೆ.

ತ್ರಿವಿಧ ದಾಸೋಹಮೂರ್ತಿ, ಪರಮಪೂಜ್ಯ ಶ್ರೀ ಶ್ರೀಗಳವರು ಇಂದು ಭೌತಿಕವಾಗಿ ನಮ್ಮ ಮುಂದೆಯಿಲ್ಲದಿದ್ದರೂ ಅವರು ಬಿಟ್ಟುಹೋದ ಆದರ್ಶಗಳು, ಸಾಧನೆಗಳು ನಮಗೆಲ್ಲ ದಾರಿದೀಪಗಳಾಗಿ ಪ್ರಜ್ವಲಿಸುತ್ತಿವೆ. ಅವರ ಚೈತನ್ಯ ಶ್ರೀಮಠದಲ್ಲಿಯೇ ಇದ್ದು ನಮ್ಮನ್ನೆಲ್ಲ ಆಶೀರ್ವದಿಸುತ್ತಿದೆ ಎಂಬ ಭಾವನೆ ಎಲ್ಲರ ಮನಸ್ಸಿನಲ್ಲಿ ಹಚ್ಚಹಸಿರಾಗಿದೆ.






ವೇದಿಕೆಯಲ್ಲಿ ಹರಗುರು ಚರಮೂರ್ತಿಗಳು ಹಾಗೂ ಗಣ್ಯರು

ಜನವರಿ ೧೯ ರಂದು ಶ್ರೀಮಠದಲ್ಲಿ ಹಬ್ಬದ ವಾತಾವರಣ. ಪರಮಪೂಜ್ಯ ಶ್ರೀ ಶ್ರೀಗಳವರ ಪ್ರಥಮ ಪುಣ್ಯಸಂಸ್ಮರಣೋತ್ಸವ ಅರ್ಥಪೂರ್ಣವಾಗಿ ನಡೆಯಿತು. ಸೂರ್ಯೋದಯಕ್ಕೆ ಮುನ್ನವೇ ಪೂಜ್ಯರ ಗದ್ದುಗೆಯಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ರುದ್ರಾಭಿಷೇಕ ಸೇರಿದಂತೆ ವಿವಿಧ ಪೂಜೆಗಳು ನಡೆದವು. ನಂತರ ಪೂಜ್ಯ ಶ್ರೀಗಳವರ ಭಾವಚಿತ್ರವನ್ನು ರುದ್ರಾಕ್ಷಿ ಮಂಟಪದಲ್ಲಿಟ್ಟು ನಂದಿಧ್ವಜ, ವೀರಗಾಸೆಗಳೊಂದಿಗೆ ಮೆರವಣಿಗೆ ಮಾಡಲಾಯಿತು. ಸಾವಿರಾರು ಜನ ಭಕ್ತರು ಈ ಮೆರವಣಿಗೆಯಲ್ಲಿ ಭಾಗಿಯಾಗಿ, ಪೂಜ್ಯ ಶಿವಕುಮಾರ ಶಿವಯೋಗಿಗಳ ಗದ್ದುಗೆ ದರ್ಶನ ಪಡೆದು ತಮ್ಮ ಜೀವನ ಪಾವನವಾಯಿತೆಂದುಕೊಂಡರು.

ಪೂಜ್ಯ ಶ್ರೀಗಳವರ ಗದ್ದುಗೆ, ಯಂತ್ರಧಾರಣೆ ಮಂಚ ಹಾಗೂ ಮಠದ ಮುಂಭಾಗದಲ್ಲಿ ವಿಶೇಷವಾಗಿ ಪುಷ್ಪಾಲಂಕಾರ ಮಾಡಲಾಗಿತ್ತು. ಈ ಅಪೂರ್ವ ದೃಶ್ಯವನ್ನು ಭಕ್ತರು ಕಣ್ತುಂಬಿಸಿಕೊಂಡರು.

ಸಭಾ ಕಾರ್ಯಕ್ರಮ ಆರಂಭವಾಗುವುದಕ್ಕಿಂತ ಮುನ್ನ ಮಠಾಧೀಶರು, ಗಣ್ಯರು ಗದ್ದುಗೆಯಲ್ಲಿ ಪೂಜೆ ಸಲ್ಲಿಸಿ ವೇದಿಕೆಗೆ ಬಂದರು. ಸಮಾರಂಭ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ, ದೇಗುಲ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಹಾಗೂ ಬೇಲಿಮಠದ ಶಿವಾನುಭವ ಚರಮೂರ್ತಿ ಪರಮಪೂಜ್ಯ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳವರ ಉಪಸ್ಥಿತಿಯಲ್ಲಿ ನಡೆಯಿತು.

ಕಾರ್ಯಕ್ರಮ ಶ್ರೀಮಠದ ವಿದ್ಯಾರ್ಥಿಗಳ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಮಾನ್ಯ ವಸತಿ ಹಾಗೂ ತೋಟಗಾರಿಕೆ ಸಚಿವರೂ, ಶ್ರೀಮಠದ ಸದ್ಭಕ್ತರು ಆದ ಶ್ರೀ ವಿ. ಸೋಮಣ್ಣನವರು ಎಲ್ಲರನ್ನು ಸ್ವಾಗತಿಸಿದರು. ಅವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸಮಾಜಕ್ಕೆ ಸಲ್ಲಿಸಿದ ಅಮೂಲ್ಯ ಸೇವೆಯನ್ನು, ಅವರ ಮೇರು ಸದೃಶ ಶಿವವ್ಯಕ್ತಿತ್ವವನ್ನು ಪರಿಚಯ ಮಾಡಿಕೊಟ್ಟರು. ಶ್ರೀ ಸೋಮಣ್ಣನವರು ೧೧ ಅಡಿ ಎತ್ತರದ ಕಂಚಿನ ಪ್ರತಿಮೆಯನ್ನು ಗೋವಿಂದರಾಜನಗರ ವಿಧಾನಸಭಾ ಕ್ಷೇತ್ರದಲ್ಲಿ ೧೬ ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಲಾಗಿದ್ದು ಮುಂದಿನ ತಿಂಗಳು ಮುಖ್ಯಮಂತ್ರಿಗಳು ಲೋಕಾರ್ಪಣೆ ಮಾಡಲಿದ್ದಾರೆ ಎಂದು ತಿಳಿಸಿದರು. ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಕಳುಹಿಸಿದ ಸಂದೇಶವನ್ನು ವಾಚನ ಮಾಡಿದರು.

ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಹಾಗೂ ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರೂ ಆದ ಶ್ರೀ ಜೆ.ಸಿ. ಮಾಧುಸ್ವಾಮಿ ಅವರು ಮಾತನಾಡಿ "ತುಮಕೂರು ಜಿಲ್ಲೆಯು ಪೂಜ್ಯ ಶ್ರೀಗಳವರ ಹೆಸರಿನಲ್ಲಿತ್ತು. ಈಗ ಅವರ ನೆನಪಿನಲ್ಲಿದೆ. ಪೂಜ್ಯರು ಒಂದು ಜಾತಿ, ಧರ್ಮಕ್ಕೆ ಸೀಮಿತವಾಗದೇ ನಾಡಿನ





ಅಲಂಕೃತಗೊಂಡ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳವರ ಗದ್ದುಗೆ



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳವರ ಬೆಳ್ಳಿಮೂರ್ತಿಯ ಭವ್ಯ ಮೆರವಣಿಗೆ

ಸಾವಿರಾರು ಮಕ್ಕಳ ಶಿಕ್ಷಣ ಹಾಗೂ ಹಸಿವಿನ ದಾಹವನ್ನು ನೀಗಿಸಿ ಅವರೆಲ್ಲರನ್ನು ಉತ್ತಮ ನಾಗರಿಕರನ್ನಾಗಿ ಮಾಡಿದರು. ದೀನ ದಲಿತರು, ಬಡ ಮಕ್ಕಳು ತಲೆ ಎತ್ತಿ ಸ್ವಾಭಿಮಾನದಿಂದ ಬದುಕಲು ಕಲಿಸಿಕೊಟ್ಟರು" ಎಂದು ಹೇಳಿದರು.

ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದ ಪ್ರವಾಸೋದ್ಯಮ ಮತ್ತು ಕನ್ನಡ ಸಂಸ್ಕೃತಿ ಸಚಿವರಾದ ಶ್ರೀ ಸಿ.ಟಿ. ರವಿಯವರು ನುಡಿನಮನದಲ್ಲಿ "ನರ ಹರನಾಗುವುದು ನಮ್ಮ ಸಂಸ್ಕೃತಿಯ ಮೂಲಕ ಎಂಬುದನ್ನು ಪುರಾಣಗಳಲ್ಲಿ ಓದಿದ್ದೇವೆ. ಆದರೆ ನಮ್ಮ ಬದುಕಿನ ಅವಧಿಯಲ್ಲಿ ದೇವರಾಗಿರುವರು ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ಅವರ ಕಾಲದಲ್ಲಿ ನಾವು ಬದುಕಿರುವುದು ನಮ್ಮ ಪೂರ್ವಜನ್ಮದ ಪುಣ್ಯ ವಿಶೇಷ. ದೇವರಿಗೂ ಪೂಜ್ಯ ಶ್ರೀಗಳವರಿಗೂ ಯಾವುದೇ ರೀತಿಯ ಭಿನ್ನತೆ ಇರಲಿಲ್ಲ. ಬಸವಣ್ಣನವರ ಆದರ್ಶಗಳನ್ನು ತತ್ತ್ವಶಃ ಪಾಲಿಸಿದವರು ಶ್ರೀಗಳವರು ಎಂದು ಹೇಳಿದರು. ಇಂದು ಸಾಮಾಜಿಕ ಆಂದೋಲನವಾಗಬೇಕಿದೆ. ಬದುಕನ್ನು ಪ್ರೀತಿಸುವಂತಹ, ಎಲ್ಲರನ್ನು ಒಂದಾಗಿ ನೋಡುವ, ಅಸ್ಪೃಶ್ಯತೆಯನ್ನು ಹೋಗಲಾಡಿಸುವ ಆಂದೋಲನವಾಗ ಬೇಕಾಗಿದೆ. ನಿತ್ಯ ಸಂಸ್ಕಾರದ ಅವಶ್ಯಕತೆಯಿದೆ" ಎಂದು ನುಡಿದರು.

**ಸನ್ಮಾನ** : ಇದೇ ಸಂದರ್ಭದಲ್ಲಿ ಪೂಜ್ಯ ಶ್ರೀಗಳವರ ೫೦ ಕೆ.ಜಿ. ಬೆಳ್ಳಿ ಪ್ರತಿಮೆ ಮಾಡಿಸಿಕೊಟ್ಟ ದೆಹಲಿ ಮೂಲದ ಕೈಗಾರಿಕೋದ್ಯಮಿ ಶ್ರೀ ಮುಖೇಶ್ ಗರ್ಗ್, ನವದೆಹಲಿ ಉಗ್ರ ನಿಗ್ರಹದಳದ ಅಧ್ಯಕ್ಷರಾದ ಶ್ರೀ ಮಣೀಂದರ್‌ಜೀತ್ ಸಿಂಗ್ ಬಿಟ್ಟ ಹಾಗೂ ಬಿಜಿಎಸ್ ಆಸ್ಪತ್ರೆಯ ಅಧ್ಯಕ್ಷರಾದ ಡಾ. ರವೀಂದ್ರನಾಥ್ ಅವರನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಸನ್ಮಾನಿಸಿದರು.

ಸನ್ಮಾನಿತರ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸಿದ ಶ್ರೀ ಮಣೀಂದರ್‌ಜೀತ್ ಸಿಂಗ್ ಬಿಟ್ಟ ಅವರು "ನಾನು ಕಾರ್ಯನಿಮಿತ್ತ ಬೆಂಗಳೂರಿಗೆ ಬಂದಾಗಲೆಲ್ಲಾ ಶ್ರೀಮಠಕ್ಕೆ ಬಂದು ಪೂಜ್ಯರ ದರ್ಶನ ಮಾಡಿ ಆಶೀರ್ವಾದ ಪಡೆಯುತ್ತಿದ್ದುದು ನನ್ನ ಪೂರ್ವಜನ್ಮದ ಪುಣ್ಯ ಎಂದ ಹೇಳಿದ ಅವರು ಪೂಜ್ಯರು ದೇಶವನ್ನು, ಮಾತೃಭೂಮಿಯನ್ನು ರಕ್ಷಿಸಿ" ಎಂದು ಆಶೀರ್ವಾದಿಸಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡರು.



ಅಂಗಾಂಗಕಸಿ ತಜ್ಞ ಡಾ. ರವೀಂದ್ರನಾಥ್ ಅವರು ಮಾತನಾಡಿ ಪರಮಪೂಜ್ಯರ ಸೇವೆ ಮಾಡುವ ಅವಕಾಶ ದೊರೆತಿದ್ದುದು ನನ್ನ ಪುಣ್ಯ. ಜೀವನದಲ್ಲಿ ಮರೆಯಲಾಗದ ಅವಿಸ್ಮರಣೀಯ ಸಂದರ್ಭ ಎಂದು ಹೇಳಿದ ಶ್ರೀಯುತರು, ಗಾಯತ್ರಿ ಮಂತ್ರದ ಮಹತ್ವವನ್ನು ತಿಳಿಸಿ ಎಲ್ಲರಿಗೂ ಮಂತ್ರವನ್ನು ಬೋಧಿಸಿದರು. ಸನ್ಮಾನಿಸಿದ್ದಕ್ಕೆ ಕೃತಜ್ಞತೆಗಳನ್ನು ಸಲ್ಲಿಸಿದರು.

ಭಾರತೀಯ ಜನತಾ ಪಕ್ಷದ ಯುವ ಘಟಕದ ಪ್ರಧಾನ ಕಾರ್ಯದರ್ಶಿ ಶ್ರೀ ಬಿ.ವೈ. ವಿಜಯೇಂದ್ರ ಅವರು ಮಾತನಾಡಿ "ಕೈಲಾಸಕ್ಕಿಂತ ಕಾಯಕ ದೊಡ್ಡದು, ಆಚಾರ ದೊಡ್ಡದು ಎಂದು ತೋರಿಸಿಕೊಟ್ಟವರು ಪೂಜ್ಯ ಶ್ರೀಗಳವರು. ಅವರು ನಡೆದಾಡುವ ಭೂಮಿಯಲ್ಲಿ ಹುಟ್ಟಿದ ನಾವೇ ಪುಣ್ಯಜೀವಿಗಳು. ಅವರು ತಮ್ಮ ಆದರ್ಶಗುಣಗಳಿಂದ ದೇವರಾಗಿ ಕಂಡರು. ಅವರದು ಮೇರುಸದೃಶ ವ್ಯಕ್ತಿತ್ವ, ಲಕ್ಷಾಂತರ ಬಡಮಕ್ಕಳಿಗೆ ತಾಯಿಯಾಗಿ ಪೊರೆದವರು" ಎಂದು ಬಣ್ಣಿಸಿದರು.

ಶಾಸಕರೂ, ಶ್ರೀಮಠದ ಸದ್ಭಕ್ತರೂ ಆದ ಶ್ರೀ ಬಸವರಾಜ ಹೊರಟ್ಟಿಯವರು ತಮ್ಮ ನುಡಿ ನಮನದಲ್ಲಿ "ಶ್ರೀಮಠದಲ್ಲಿ ದೊರೆಯುವ ಸಂಸ್ಕೃತಿ ಬೇರೆ ಎಲ್ಲಿಯೂ ಕಾಣಸಿಗುವುದಿಲ್ಲ. ಮಕ್ಕಳು ದೇವರ ಸಮಾನ ಎಂದು ಪೂಜ್ಯರು ನೋಡುತ್ತಿದ್ದರು. ಹತ್ತುಸಾವಿರ ಮಕ್ಕಳನ್ನು ಜಾತ್ಯಾತೀತವಾಗಿ ಸಲಹಿದರು. ಸೂರ್ಯ ಚಂದ್ರರಿರುವವರೆಗೂ ಪೂಜ್ಯರ ಹೆಸರು ಇರುತ್ತದೆ. ಬಸವಣ್ಣನವರನ್ನು, ದೇವರನ್ನು ನೋಡಲಿಲ್ಲ. ಆದರೆ ಶ್ರೀಗಳವರ ಮೂಲಕ ದೇವರನ್ನು ಕಂಡಿದ್ದೇವೆ. ಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿಯವರೇ ಅತ್ಯಂತ ದೊಡ್ಡ ರತ್ನ. ಇಂತಹ ಅನರ್ಘ್ಯರತ್ನಕ್ಕೆ ಭಾರತರತ್ನ ಕೊಡಿ ಎಂದು ಕೇಳಬಾರದು" ಎಂದು ಹೇಳಿದರು.

**ಕೃತಿಗಳ ಲೋಕಾರ್ಪಣೆ** : ದೇಗುಲಮಠದ ಪೂಜ್ಯ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಬ್ಯಾಲಕೆರೆ ಬಿ. ಶಿವಣ್ಣನವರು ವಿರಚಿತ **'ಯೋಗಾಂಗ ತ್ರಿವಿಧಿ'**, ಸಿ.ಎನ್. ಸದಾಶಿವಯ್ಯ ವಿರಚಿತ **'ಶ್ರೀ ಗುರು ಕರುಣೆ ಮತ್ತು ನಿಷ್ಠೆ'**, ಮುದ್ದೇನಹಳ್ಳಿ ನಂಜಯ್ಯನವರ **'ಶ್ರೀ ಶಿವಕುಮಾರ ಚರಿತೆ'**, ಹೆಚ್.ವಿ. ರಾಜಣ್ಣನವರ ಸಂಪಾದಿಸಿದ **'ಪ್ರಾತಃಸ್ಮರಣೀಯರು'**, ತುಳಸಿರಾಮಯ್ಯನವರು ಸಂಗ್ರಹಿಸಿದ **'ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಶ್ರೀವಾಣಿ ಮತ್ತು ಭಗವಾನ್ ಬುದ್ಧರ ದಿವ್ಯಸಂದೇಶ'** ಕೃತಿ ಹಾಗೂ ಪ್ರಶಾಂತ ಹೇಮಂತ ರೆಡ್ಡಿಯವರ **'ನಡೆದಾಡುವ ದೇವರು'** ಕೃತಿಗಳನ್ನು ಲೋಕಾರ್ಪಣೆ ಮಾಡಿದರು. ಇದೇ ಸಂದರ್ಭದಲ್ಲಿ ವಿಜಯವಾಣಿ ಹೊರತಂದ ೪೮ ಪುಟಗಳ ವಿಶೇಷ ಪುರವಣಿಯನ್ನು ಲೋಕಾರ್ಪಣೆ ಮಾಡಲಾಯಿತು.

ಪರಮಪೂಜ್ಯ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ನುಡಿ ಸಂದೇಶದಲ್ಲಿ "ಪೂಜ್ಯರಾದ ಶಿವಕುಮಾರ ಶ್ರೀಗಳು ಭೌತಿಕವಾಗಿ ನಮ್ಮಿಂದ ಮರೆಯಾಗಿದ್ದರೂ ಮಠದಲ್ಲಿ ಅವರಿಲ್ಲ ಎಂಬ ಭಾವನೆ ನಮಗಿಲ್ಲ. ನೆನೆದವರ ಮನದಲ್ಲಿ ಚಿರಸ್ಥಾಯಿಯಾಗಿ ಎಲ್ಲರ ಹೃನ್ಮಂದಿರಗಳಲ್ಲಿ ನೆಲೆಸಿದ್ದಾರೆ. ಅವರ ಸಾಧನೆಯೇ ನಮ್ಮ ನಡುವೆ ಅವರನ್ನು ಜೀವಂತವಾಗಿಸಿದೆ. ಶ್ರೀಗಳು ಎಲ್ಲರ ಹೃದಯಗಳಲ್ಲಿ ಹಣತೆಯಾಗಿ ಬೆಳಗುತ್ತಿದ್ದಾರೆ. ರಾಜಕೀಯದವರು, ಸಮಾಜ ಸೇವಕರು, ಕಾವಿತೊಟ್ಟ ಮಠಾಧಿಪತಿಗಳು ಎಲ್ಲರಿಗೂ ಶ್ರೀಗಳು ಮಾರ್ಗದರ್ಶಕರಾಗಿದ್ದರು. ಸ್ವತಂತ್ರ ಭಾರತದ ಕಲ್ಪನೆ ಕಂಡಿದ್ದ ಶ್ರೀಗಳವರು ರಾಷ್ಟ್ರಭಕ್ತಿಯನ್ನು ವಿದ್ಯಾರ್ಥಿಗಳಲ್ಲಿ ಬಿತ್ತಿದ್ದರು' ಎಂದು ಹೇಳಿದರು. "ದೇಶದಲ್ಲಿ ಮನಸ್ಸು ಮನಸ್ಸುಗಳ ನಡುವೆ ವಿಷಬೀಜ ಬಿತ್ತುವ ಸನ್ನಿವೇಶ ಎದುರಾಗಿದೆ. ಜಗತ್ತು ಯುದ್ಧ ಭೂಮಿಯಲ್ಲಿ ಇದೆ. ಜನರು ಶಾಂತಿ ನೆಮ್ಮದಿಯಿಂದ ಬದುಕಬೇಕಾಗಿದೆ. ಅದಕ್ಕೆ ಶ್ರೀಗಳವರು ಹಾಕಿಕೊಟ್ಟ ದಾರಿಯಲ್ಲಿ ಎಲ್ಲರೂ ನಡೆಯಬೇಕು. ಪೂಜ್ಯರು ದಿನದ ೨೪ ಗಂಟೆಗಳನ್ನು ಅರ್ಥಪೂರ್ಣವಾಗಿ ಸವೆಸಿದರು. ಮಠದ ಪರಂಪರೆಗೆ ಕೀರ್ತಿಪ್ರಾಯರಾಗಿದ್ದರು. ಅಪರೂಪದ ಶ್ರೇಷ್ಠ ಸಂತರು" ಎಂದು ಪ್ರಶಂಸಿಸಿದರು.

ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಪೂಜ್ಯರ ಹಾದಿಯಲ್ಲಿ ಅವರ ಮಾರ್ಗದರ್ಶನದ ಮುಂಬೆಳಕಿನಲ್ಲಿ ಮಠವನ್ನು ಮುನ್ನಡೆಸುತ್ತಿರುವುದಕ್ಕೆ ಸಂತಸವನ್ನು ವ್ಯಕ್ತಪಡಿಸಿದರು.

ಬೇಲಿಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳವರು ತಮ್ಮ ನುಡಿನಮನಗಳಲ್ಲಿ "ಶ್ರೀಗಳವರು ಪ್ರತಿಕ್ಷಣ ನಮ್ಮ ಹೃದಯದಲ್ಲಿದ್ದಾರೆ. ಸಿದ್ಧಲಿಂಗ ಸ್ವಾಮಿಗಳವರಲ್ಲಿ ಶಿವಕುಮಾರ ಸ್ವಾಮಿಗಳು ಕಾಣುತ್ತಿದ್ದಾರೆ. "ಬಿಸಿಲೆಂಬ ಗುರುವಿಗೆ ನೆಳಲೆಂಬ ಶಿಷ್ಯ, ನಿರಾಳಲಿಂಗಕ್ಕೆ ಬಯಲೆಸೆಜ್ಜೆ, ವಾಯುವೆ ಶಿವದಾರ, ಬೆಳಗೆ ಸಿಂಹಾಸನ, ಅತ್ತಲಿತ್ತ ಚಿತ್ತವ ಹರಿಯಲೀಯದೆ, ಮಜ್ಜನಕ್ಕೆರೆದು ಸುಖಿಯಾದೆ ಗುಹೇಶ್ವರಾ' ಎಂಬ ಪ್ರಭುದೇವರ ವಚನವನ್ನು ಉಲ್ಲೇಖಿಸಿದ ಶ್ರೀ ಶಿವರುದ್ರ ಸ್ವಾಮಿಗಳು, ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳವರು ಸಿದ್ಧಲಿಂಗ ಗುರುಗಳಾಗಿ ನಮಗೆ ಕಾಣುತ್ತಿದ್ದಾರೆ" ಎಂದು ಹೇಳಿದರು. "ಶ್ರೀಮಠದಲ್ಲಿ ದಾಸೋಹ ನಿರ್ವಹಣೆಗಾಗಿ ಅನೇಕ ಸಮಸ್ಯೆಗಳು ಎದುರಾದರೂ, ಎದೆಗುಂದದೆ ಎಲ್ಲವೂ ಸಿದ್ಧಲಿಂಗನ ಚಿತ್ತ ಎಂದು ಭಾವಿಸಿ ಮಠವನ್ನು ಕಟ್ಟಿ ಬೆಳೆಸಿದರು. ಅವರು ದಿವ್ಯಜ್ಯೋತಿಯಾಗಿ, ಪ್ರಭೆಯಾಗಿ ಬೆಳಗಿದರು' ಎಂದು ನುಡಿದರು. "ಮಠಾಧೀಶರು ಹೇಗೆ ಇರಬೇಕು ಎಂದು ಶಿವಕುಮಾರ ಶ್ರೀಗಳು ಯಾರಿಗೂ ಉಪದೇಶ ನೀಡಲಿಲ್ಲ. ಅವರ ನಡೆ ನುಡಿಯೇ ಮೇರು ವ್ಯಕ್ತಿತ್ವದ ಮಾದರಿಗಳನ್ನು ಸಾರಿತು" ಎಂದು ಹೇಳಿದರು.



ದಿವ್ಯನೇತೃತ್ವವನ್ನು ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ನುಡಿ ಮಂಗಳದಲ್ಲಿ "ಪೂಜ್ಯರ ಸ್ಮರಣೆಯೇ ನಮಗೆ ಶಕ್ತಿ, ಬೆಳಕು. ಪೂಜ್ಯರ ಜೀವನ ಒಂದು ತೆರೆದ ಪುಸ್ತಕದಂತಿತ್ತು. ಅವರ ಜೀವನವೇ ಸಂದೇಶ ನೀಡುವಂತಹದು. ತೊಂಬತ್ತು ವರ್ಷಗಳ ಸುದೀರ್ಘಕಾಲ ಮಠವನ್ನು ಸತ್ಯ, ಶುದ್ಧ, ಕಾಯ, ವಾಚಾ ಜೀವನದಿಂದ. ಮಠವನ್ನು ತುಂಬಾ ಎತ್ತರಕ್ಕೆ ಕೊಂಡೊಯ್ದರು. ದಾಸೋಹ, ಕಾಯಕ ಸೇವೆಯನ್ನು ಶ್ರೀಮಠದಲ್ಲಿ ಸಾಕಾರಗೊಳಿಸಿದರು. ಶ್ರೀ ಉದ್ದಾನ ಶಿವಯೋಗಿಗಳು ಕಠಿಣ ಪರೀಕ್ಷೆಗಳನ್ನೊಡ್ಡಿ ಶುದ್ಧ ಚಿನ್ನವಾಗಿಸಿದರು. ಅವರ ದೀರ್ಘವಾದ ಆಯಸ್ಸಿನಗುಟ್ಟು ಲಿಂಗಪೂಜಾ ನಿಷ್ಠೆ, ಪ್ರಸಾದ ನಿಷ್ಠೆ, ಸರಳ ಜೀವನವಾಗಿತ್ತು. ಅವರೆಂದೂ ವೈಯಕ್ತಿಕ ಸುಖ ಬಯಸಿದವರಲ್ಲ. ವಿದ್ಯಾರ್ಥಿಗಳ ಮಧ್ಯೆಯೇ ಅನೇಕ ವರ್ಷಗಳನ್ನು ಕಳೆದರು. ಎಲ್ಲ ಕೆಲಸಗಳಲ್ಲಿಯೂ ಕಾಯಕ ಶ್ರದ್ಧೆ ಮಾಡಿಕೊಂಡು ಬಂದರು. ಕಾವಿಗೆ ಒಂದು ಘನತೆ, ಗೌರವ, ಮಹತ್ವವನ್ನು ತಂದುಕೊಟ್ಟಿದ್ದರು. ಹಳೆಯ ವಿದ್ಯಾರ್ಥಿಗಳ ಸಂಘ, ಶ್ರೀಮಠದ ಅಭಿವೃದ್ಧಿಗೆ ಸಲ್ಲಿಸುತ್ತಿರುವ ಸೇವೆಯನ್ನು ಪ್ರಶಂಸಿಸಿದರು. ಪೂಜ್ಯರ ಸಾಧನೆ, ಸೇವೆಯನ್ನು ಕೇಳಿದ ಪ್ರಧಾನಮಂತ್ರಿಗಳು ಆಹ್ವಾನವಿಲ್ಲದೇ ಶ್ರೀಮಠಕ್ಕೆ ಬಂದುದು ಇದೇ ಪ್ರಥಮ" ಎಂದು ಹೇಳಿದರು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ನುಡಿನಮನ

"ಸಿದ್ಧಗಂಗಾ ಮಠ ಇಷ್ಟು ದೊಡ್ಡ ಇತಿಹಾಸ, ಪರಂಪರೆ ಹೊಂದಲು ಶ್ರೀಗಳ ಸೇವೆಯೇ ಕಾರಣ. ಶ್ರೀಗಳ ಜೀವನವೇ ಒಂದು ಸಂದೇಶ. ಆರ್ಥಿಕ ಸಂಪನ್ಮೂಲ ಕೊರತೆಯಿಂದಾಗಿ ಮಠವನ್ನು ಮುನ್ನಡೆಸಲು ಸಾಧ್ಯವಾಗದಿದ್ದಾಗ, ಶ್ರೀಗಳು ಮಂಡಿಪೇಟೆಯಲ್ಲಿ ವರ್ತಕರಿಂದ ಸಾಲ ಮಾಡಿ, ದವಸ ಧಾನ್ಯಗಳನ್ನು ತಂದು ಮಠದ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶ್ರಮಿಸುತ್ತಿದ್ದರು. ಇದರ ಫಲವಾಗಿ ಮಠದಲ್ಲಿಂದು ಹತ್ತು ಸಾವಿರ ಮಕ್ಕಳು ಓದುತ್ತಿದ್ದಾರೆ. ಪರಮಪೂಜ್ಯರು ಪ್ರಶಸ್ತಿಯನ್ನು ಎಂದೂ ಬಯಸಿದವರಲ್ಲ. ಅವರಿಗೆ ಭಾರತರತ್ನದ ಅಗತ್ಯವಿಲ್ಲ. ಅವರು ಜನರ ಹೃದಯರತ್ನ. ಪೂಜ್ಯರ ಸಮಕಾಲೀನರಾಗಿರುವ ಸುತ್ತೂರು ಶ್ರೀಗಳ ಮಾರ್ಗದರ್ಶನದಲ್ಲಿ ಶ್ರೀಮಠದ ಸೇವಾ ಕಾರ್ಯಗಳನ್ನು ಮುಂದುವರಿಸಲಾಗುವುದು" ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಅನ್ನದಾನ ಸೇವಾ ಟ್ರಸ್ಟ್ (ರಿ). ಬೆಂಗಳೂರು ವತಿಯಿಂದ ಕಾರ್ಯಸೂಚಿ ಕೈಪಿಡಿ ಮತ್ತು ವೆಬ್‌ಸೈಟ್ ಲೋಕಾರ್ಪಣೆ ಮಾಡಿದರು. ಡಾ. ಎಂ. ಶಾಲಿನಿಯವರು ಕಾರ್ಯಕ್ರಮವನ್ನು ನಿರೂಪಿಸಿದರು.

**ದಾಸೋಹ ವ್ಯವಸ್ಥೆ** : ಶ್ರೀಮಠದಲ್ಲಿ ಶ್ರೀ ಅನ್ನಪೂರ್ಣೇಶ್ವರಿ ಸದಾ ನೆಲೆಸಿದ್ದಾಳೆ ಎಂಬುದಕ್ಕೆ ಮಠದಲ್ಲಿ ನಿತ್ಯ ನಡೆಯುವ ದಾಸೋಹವೇ ಒಂದು ನಿದರ್ಶನ. ನೂರು ವರ್ಷಗಳ ಹಿಂದೆ ಶ್ರೀ ಅಟವೀಸ್ವಾಮಿಗಳು ಹಚ್ಚಿದ ದಾಸೋಹ ಜ್ಯೋತಿ, ಶ್ರೀ ಉದ್ದಾನ ಶಿವಯೋಗಿಗಳವರ ದಿವ್ಯಸಂಕಲ್ಪಸಿದ್ಧಿ, ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕಾಯಕ-ದಾಸೋಹ ನಿಷ್ಠೆ, ಲಿಂಗಪೂಜೆ ನಿಷ್ಠೆ, ಭಕ್ತರ,



ಪ್ರಸಾದ ಸ್ವೀಕರಿಸುತ್ತಿರುವ ಭಕ್ತರು

ಅಭಿಮಾನಿಗಳ ಉದಾರ ಕೊಡುಗೆಯಿಂದ ಅವಿಚ್ಛಿನ್ನವಾಗಿ ನಡೆದುಕೊಂಡು ಬರುತ್ತಿದೆ. ಪರಮಪೂಜ್ಯರ ಜನ್ಮದಿನಾಚರಣೆ, ಗುರುವಂದನಾ, ಜಾತ್ರೆ ಮೊದಲಾದ ಸಂದರ್ಭಗಳಲ್ಲಿ ಲಕ್ಷಾಂತರ ಜನ ಭಕ್ತರು ಆಗಮಿಸಿ, ಪ್ರಸಾದವನ್ನು ಸ್ವೀಕರಿಸುತ್ತಿರುವುದು ಕಲ್ಯಾಣದ ಮಹಾಮನೆಯ ನೆನಪನ್ನು ತರುತ್ತಿದೆ.

ಪರಮಪೂಜ್ಯರ ಪ್ರಥಮ ಪುಣ್ಯಸಂಸ್ಮರಣೋತ್ಸವ ಸಮಾರಂಭಕ್ಕೆ ಲಕ್ಷಕ್ಕೂ ಹೆಚ್ಚು ಜನ ಭಾಗವಹಿಸಿದ್ದರು. ದಾಸೋಹಕ್ಕೆ ಅಡಚಣೆಯುಂಟಾಗಬಾರದೆಂಬ ಉದ್ದೇಶದಿಂದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ಶ್ರೀಮಠದ ವಸ್ತುಪ್ರದರ್ಶನ, ವಜ್ರಮಹೋತ್ಸವ ನೆನಪಿನ ಪ್ರಸಾದ ನಿಲಯ, ಸಾದರಕೊಪ್ಪಲು, ನಿರ್ಮಾಣ ಹಂತದ ಸಾಮೂಹಿಕ ಪ್ರಾರ್ಥನಾ ಮಂದಿರ, ಹಳೆಯ ಪ್ರಸಾದ ನಿಲಯವೂ ಸೇರಿ ಒಟ್ಟು ಏಳು ಕಡೆ ವ್ಯವಸ್ಥೆ ಮಾಡಲಾಗಿತ್ತು. 'ನೂರು ಕ್ವಿಂಟಾಲ ಬೂಂದಿ, ಒಂದು ಲಕ್ಷಕ್ಕೂ ಅಧಿಕ ಮೈಸೂರು ಪಾಕನ್ನು ತಯಾರಿಸಲಾಗಿತ್ತು. ಬೆಳಿಗ್ಗೆ ೭ ಗಂಟೆಗೆ ಉಪಹಾರದಿಂದ ಆರಂಭವಾದ ದಾಸೋಹ ರಾತ್ರಿ ೧೧ ಗಂಟೆಯವರೆಗೆ ನಿರಂತರವಾಗಿ ನಡೆಯಿತು. ದಾಸೋಹ ಸಿದ್ಧತೆಯಲ್ಲಿ ಮಠದ ಸಿಬ್ಬಂದಿಯವರ ಜೊತೆಗೆ ಶ್ರೀಮಠದ ಶಿಕ್ಷಣ ಸಂಸ್ಥೆಯ



ಕಲಾವಿದರಿಂದ ಸಾಂಸ್ಕೃತಿಕ ಕಾರ್ಯಕ್ರಮ

ಮಹಿಳಾ ಸಿಬ್ಬಂದಿಯೂ ತೊಡಗಿಸಿಕೊಂಡಿದ್ದರು. ಶಿಕ್ಷಣ ಸಂಸ್ಥೆಯ ಶಿಕ್ಷಕ ಹಾಗೂ ಶಿಕ್ಷಕೇತರ ಸಿಬ್ಬಂದಿಯವರು ಪ್ರಸಾದ ಬಡಿಸುವಲ್ಲಿ ಸೇವೆ ಸಲ್ಲಿಸಿದರು.

ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳು ಲೋಕಕಲ್ಯಾಣಕ್ಕಾಗಿ ಸಲ್ಲಿಸಿದ ಅನುಪಮ ಸೇವೆಯಿಂದ ಉಪಕೃತರಾದ ಭಕ್ತರು ಸ್ವಯಂ ಪ್ರೇರಣೆಯಿಂದ ಕಾಣಿಕೆ ರೂಪದಲ್ಲಿ ಅಕ್ಕಿ, ರವೆ, ತೊಗರಿಬೇಳೆ, ಸಕ್ಕರೆ, ತರಕಾರಿ ಹೀಗೆ ದಾಸೋಹಕ್ಕೆ ಅಗತ್ಯವಾದ ಪಡಿಪದಾರ್ಥಗಳನ್ನು ತಂದುಕೊಟ್ಟರು. ತುಮಕೂರು ಗ್ರಾಮಾಂತರ ಕ್ಷೇತ್ರದ ಶಾಸಕ ಶ್ರೀ ಡಿ.ಸಿ. ಗೌರಿಶಂಕರ್ ೨೦ ಕ್ವಿಂಟಾಲ್ ಅಕ್ಕಿಯನ್ನು ನೀಡಿದರೆ, ದಾವಣಗೆರೆಯಿಂದ ೧ ಲೋಡ್ ಸಕ್ಕರೆ, ಯಶವಂತಪುರ, ಚಿಕ್ಕಬಳ್ಳಾಪುರ, ಹೊಸಕೋಟೆಯಿಂದ ೪-೫ ಲೋಡ್ ತರಕಾರಿ, ಮಂಡ್ಯದಿಂದ ಬೆಲ್ಲ, ಹೀಗೆ ಅನೇಕ ಭಾಗಗಳಿಂದ ಹೆಸರು ಹೇಳಲು ಇಚ್ಛಿಸದ ಭಕ್ತರು ಕಾಣಿಕೆ ನೀಡಿದ್ದಾರೆ. ಪರಮಪೂಜ್ಯರು ಆಗಾಗ್ಗೆ ಹೇಳುತ್ತಿದ್ದ "ಭಕ್ತರೇ ಮಠದ ಆಸ್ತಿ" ಎಂಬ ಅಂತಃಕರಣದ ನುಡಿ ಸಾಕಾರಗೊಳ್ಳುತ್ತಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು.

ಸಮಾರಂಭದ ಅಂಗವಾಗಿ ತುಮಕೂರಿನ ಎಂ.ಪಿ. ಸುಗಮ ಸಂಗೀತ ಕಲಾ ತಂಡದಿಂದ ಸುಗಮ ಸಂಗೀತ ಕಾರ್ಯಕ್ರಮ ಹಾಗೂ ಕನ್ನಡ ಮತ್ತು ಸಂಸ್ಕೃತ ಇಲಾಖೆ ವತಿಯಿಂದ ಜಾನಪದ ಜಾತ್ರೆ ಕಾರ್ಯಕ್ರಮ ನಡೆಯಿತು. ನಾಡಿನ ವಿವಿಧ ಜನಪದ ಕಲಾ ತಂಡಗಳು ಭಾಗವಹಿಸಿ ಪ್ರೇಕ್ಷಕರ ಮನಸ್ಸನ್ನು ಸೂರೆಗೊಂಡಿತು.

ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದ ಜಿಲ್ಲಾಡಳಿತ, ಪೊಲೀಸ್ ಸಿಬ್ಬಂದಿ, ಮಠದ ಆಡಳಿತ ವರ್ಗ ಹಾಗೂ ಸಿಬ್ಬಂದಿ ಅಭಿನಂದನಾರ್ಹರು.



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥



ಅವಾಚ್ಯಾತ್ಮ ಸ್ವರೂಪಾಯ ಶಿವಭಾವ ಪ್ರದಾಯಿನೇ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾಮಹೋತ್ಸವ ಆಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಮಠ, ತುಮಕೂರು - 572 104

ಪದ್ಮಭೂಷಣ, ಕರ್ನಾಟರತ್ನ, ಶ್ರೀ.ಮ.ನಿ.ಪ್ರಸ್ವ, ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ದಿವ್ಯ ಕೃಪಾಶೀರ್ವಾದದೊಂದಿಗೆ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1941 ನೇ ವಿಕಾರಿನಾಮ ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ ಸಪ್ತಮಿ | 15-02-2020 | ಶನಿವಾರ | | ಶ್ರೀ ಗೋಸಲ ಸಿದ್ಧೇಶ್ವರಸ್ವಾಮಿ ಉತ್ಸವ ಮತ್ತು |
| | | | ರಾತ್ರಿ | ಶೂನ್ಯ ಸಿಂಹಾಸನಾರೋಹಣೋತ್ಸವ |
| | | | | ವೃಷಭ ವಾಹನ |
| ಮಾಘ ಬಹುಳ ಅಷ್ಟಮಿ | 16-02-2020 | ಭಾನುವಾರ | ರಾತ್ರಿ | ನಂದಿವಾಹನ ಮತ್ತು ಗಜ ವಾಹನ |
| ಮಾಘ ಬಹುಳ ನವಮಿ | 17-02-2020 | ಸೋಮವಾರ | ,, | ಹುಲಿವಾಹನ ಮತ್ತು ಸಿಂಹವಾಹನ |
| ಮಾಘ ಬಹುಳ ದಶಮಿ | 18-02-2020 | ಮಂಗಳವಾರ | ,, | ಹುತ್ತದವಾಹನ ಮತ್ತು ಶೇಷವಾಹನ |
| ಮಾಘ ಬಹುಳ ಏಕಾದಶಿ | 19-02-2020 | ಬುಧವಾರ | ,, | ಅಶ್ವವಾಹನ ಮತ್ತು ನವಿಲು ವಾಹನ |
| ಮಾಘ ಬಹುಳ ದ್ವಾದಶಿ | 20-02-2020 | ಗುರುವಾರ | ,, | ರಾವಣವಾಹನ, ಬಿಲ್ವವೃಕ್ಷವಾಹನ ಮತ್ತು |
| | | | | ನವರಂಗಪಾಲಕಿ ಉತ್ಸವ |
| ಮಾಘ ಬಹುಳ ತ್ರಯೋದಶಿ | 21-02-2020 | ಶುಕ್ರವಾರ | ,, | ಮಹಾಶಿವರಾತ್ರಿ ಪೂಜಾದಿಗಳು, |
| | | | | ಬೆಳ್ಳಿರಥೋತ್ಸವ |
| | | | | ಮುತ್ತಿನ ಪಾಲಕಿ ಉತ್ಸವ |
| ಮಾಘ ಬಹುಳ ಚತುರ್ದಶಿ | 22-02-2020 | ಶನಿವಾರ | | ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮಹಾ ರಥೋತ್ಸವ |
| | | | | ರುದ್ರಾಕ್ಷಿ ಮಂಟಪೋತ್ಸವ |
| ಮಾಘ ಬಹುಳ ಅಮಾವಾಸ್ಯೆ• | 23-02-2020 | ಭಾನುವಾರ | ರಾತ್ರಿ | 11ಗಂಟೆಗೆ ಬೆಳ್ಳಿಪಾಲಕಿ ಉತ್ಸವ |
| ಫಾಲ್ಗುಣ ಶುದ್ಧ ಪಾಡ್ಯ | 24-02-2020 | ಸೋಮವಾರ | ,, | ತೆಪ್ಪೋತ್ಸವ ಮತ್ತು ಪಂಚಬ್ರಹ್ಮೋತ್ಸವ |

ದಿನಾಂಕ 15-02-2020 ಶನಿವಾರದಿಂದ ಎತ್ತುಗಳ ಪರಿಷೆ, ದನಗಳ ಪ್ರದರ್ಶನ ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿತರಣೆ ಇರುತ್ತದೆ. ಪ್ರತಿದಿನ ಸಂಜೆ ಸಾಮೂಹಿಕ ಪ್ರಾರ್ಥನೆ ನಂತರ ವಿಶೇಷ ಧಾರ್ಮಿಕ ಉಪನ್ಯಾಸಗಳು, ದಿನಾಂಕ 12-02-2020 ರಿಂದ ಪ್ರಾರಂಭವಾಗುವ " ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ " ದಲ್ಲಿ ಪ್ರತಿದಿನವೂ ಸಂಜೆ " ಸಾಂಸ್ಕೃತಿಕ ಚಟುವಟಿಕೆಗಳೂ " ನಡೆಯುತ್ತವೆ. ಸರ್ವರೂ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಲಿಂಗಸ್ವಾಮಿಗಳು
ಅಧ್ಯಕ್ಷರು, ಶ್ರೀ ಸಿದ್ಧಗಂಗಾಮಠ.







## ಸಿದ್ದಗಂಗಾ ಮಠದಲ್ಲಿ ಅಮೃತವಾಹಿನಿ

ನಿಮ್ಮಷ್ಟು ಅಗಣಿತ
ಮಕ್ಕಳನು ಸಾಕಿ ಸಲುಹಿದ
ಬೇರೊಬ್ಬರಿಲ್ಲ ಈ ಜಗದಲಿ
ನೀವೇ ಮಹಾತಾಯಿ ತಂದೆಯಾದಿರಿ.

ದೂರದ ಮಿನುಗುವ ನಕ್ಷತ್ರಗಳಂತಹ
ಮಕ್ಕಳನು ನಿಮ್ಮ ಸುತ್ತಲ ಪುಣ್ಯಧರೆಗೆ ಸೆಳೆದು ತಂದಿರಿ
ಅವರಿಗೆಲ್ಲ ಅರಿವಿನ ಬೆಳಕನು ತೊಡಿಸಿ
ಹೊಳೆವ ಮಣಿಗಳ ಮಾಡಿದಿರಿ
ಬೆಳಗುವ ಹಣತೆಗಳಾಗಿಸಿ
ಜಗದ ಮೂಲೆ ಮೂಲೆಗಳಿಗೆ ಹಂಚಿದಿರಿ.

ಬರಡಾಗಿದ್ದ ಹೊಲ ತೋಟ ಗದ್ದೆಗಳ ಮೇಲೆ
ಬೆವರ ಹನಿಗಳ ಮಳೆಯ ಸುರಿಸಿದಿರಿ
ನೀವು ಉತ್ತು ಬಿತ್ತಿಬೆಳೆದ
ಹುಲುಸಾದ ಬೆಳೆಯನು
ಉರಿವ ಹಸಿವಿನ ಕಣಜದ
ಹೊಟ್ಟೆಗಳಿಗೆ ತುಂಬಿದಿರಿ
ಸಂತಸದ ಚಿಲುಮೆಯನು ಹೊಮ್ಮಿಸಿ
ನಗೆಯ ಹೊನಲನು ಹರಿಸಿದಿರಿ.

ಬೆಟ್ಟದ ಮೇಲೆ ಬತ್ತದೆ ತಣಿಸುತ್ತಿದ್ದಾಳೆ
ತಾಯಿ ಸಿದ್ದಗಂಗೆ
ನೆಲದ ಮೇಲೆ ಆರದೆ ಉರಿಯುತ್ತಿದೆ
ಶತಮಾನಗಳ ಹಿಂದೆ ಹೊತ್ತಿಸಿದ ಒಲೆ
ಹಾರುತ್ತಿದೆ ಮುಗಿಲಿನ ಕಡೆಗೆ
ಮಹಾಮನೆಯ ನಗೆಯ ಹೊಗೆ.

ಒರತೆ-ಒಲೆಗಳ ನಡುವೆ
ಕರುಣೆ ವಾತ್ಸಲ್ಯಗಳ
ಅಮೃತವಾಹಿನಿಯೊಂದು ಹರಿದಿದೆ
"ಇಲ್ಲಿಯೂ ಸಲ್ಲಿದಿರಿ ಅಲ್ಲಿಯೂ ಸಲ್ಲಿದಿರಿ"
ಶರಣು ಶರಣು ಶರಣಾರ್ಥಿಗಳು.

ಜರಗನಹಳ್ಳಿ ಶಿವಶಂಕರ್
'ಅಣ್ಣನ ಮನೆ', ಜರಗನಹಳ್ಳಿ
ಜೆ.ಪಿ. ನಗರ, ಬೆಂಗಳೂರು-೫೬೦೦೭೮

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ. ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿ ರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೨೨೨







ನುಡಿನಮನ

## ಸಿದ್ಧಗಂಗೆಯ ಮಹಾಮಾನವತಾವಾದಿ

– ನಗರ್ಲೆ ಶಿವಕುಮಾರ *

ಪ್ರಾಚೀನ ಇತಿಹಾಸವಿರುವ, ದೀರ್ಘಕಾಲದ ಪರಂಪರೆ ಇರುವ, ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ದಾಸೋಹ ಸೇವೆಯಲ್ಲಿ ಪ್ರಸಿದ್ಧಿ ಪಡೆದಿರುವುದು ತುಮಕೂರು ಜಿಲ್ಲೆಯ ಸಿದ್ಧಗಂಗಾ ಕ್ಷೇತ್ರದ ಪರಂಪರೆಯನ್ನು ಅವಲೋಕಿಸಿದಾಗ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳವರ ನಂತರದ ಮಾಹಿತಿಗಳು ಲಭ್ಯವಿಲ್ಲವಾದರೂ ಹತ್ತೊಂಭತ್ತನೆಯ ಶತಮಾನದಲ್ಲಿ ಶ್ರೀಮಠದಲ್ಲಿ ಶ್ರೀ ಮುಪ್ಪಿನಾರ್ಯರು. ಶ್ರೀ ರುದ್ರಸ್ವಾಮಿಗಳು, ಶ್ರೀ ಸಿದ್ಧಲಿಂಗಸ್ವಾಮಿಗಳು ಶ್ರೀಕ್ಷೇತ್ರದ ಅಧಿಪತಿಗಳಾಗಿದ್ದರು. ನಂತರ ಬಂದ ಶ್ರೀ ಅಟವೀಸ್ವಾಮಿಗಳವರು ಶ್ರೀಮಠದಲ್ಲಿ ದಾಸೋಹ ಮತ್ತು ಸಂಸ್ಕೃತ ವಿದ್ಯಾಭ್ಯಾಸಗಳೆರಡಕ್ಕೂ ಅಂಕುರಾರ್ಪಣೆಗೈದರು. ಶ್ರೀ ಅಟವೀಸ್ವಾಮಿಗಳು ಅಂದು ದಾಸೋಹಕ್ಕಾಗಿ ಹಚ್ಚಿದ ಒಲೆ ಇಂದಿಗೂ ಆರಿಲ್ಲ. ಅಂದು ಪ್ರಾರಂಭಿಸಿದ ಸಂಸ್ಕೃತ ಪಾಠಶಾಲೆ ಇಂದು ಭಾರತದಲ್ಲೇ ಬಹುದೊಡ್ಡ ಸಂಸ್ಕೃತ ವಿದ್ಯಾಲಯವೆಂದು ಹೆಸರು ಪಡೆದಿದೆ.

ಶ್ರೀ ಅಟವೀಸ್ವಾಮಿಗಳವರ ನಂತರ ಶ್ರೀ ಉದ್ದಾನ ಶಿವಯೋಗಿಗಳವರು ಶ್ರೀಮಠದ ಅಧಿಪತಿಗಳಾದರು. ಅವರು ಶಿವಯೋಗ ಸಾಧನೆಯಲ್ಲಿ ಅತ್ಯುನ್ನತ ಸ್ಥಿತಿಯನ್ನು ಸಾಧಿಸಿದರು. ಭಕ್ತರು ಉದ್ದಾನ ಶ್ರೀಗಳವರನ್ನು ಸಾಕ್ಷಾತ್ ಶಿವಸ್ವರೂಪಿಗಳೆಂದೇ ನಂಬಿದ್ದರು.

ತಮ್ಮ ಮುಂದಿನ ಉತ್ತರಾಧಿಕಾರಿಗಳಾಗಿ ಶ್ರೀ ಮರುಳಾರಾಧ್ಯ ಸ್ವಾಮಿಗಳವರನ್ನು ಶ್ರೀ ಉದ್ದಾನ ಶಿವಯೋಗಿಗಳು ನೇಮಿಸಿಕೊಂಡರು. ಆದರೆ ಕೆಲವು ವರ್ಷಗಳ ನಂತರ ಶ್ರೀ ಮರುಳಾರಾಧ್ಯ ಸ್ವಾಮಿಗಳವರು ಹಠಾತ್ತನೆ ಖಾಯಿಲೆಗೊಳಗಾಗಿ ಲಿಂಗೈಕ್ಯರಾದರು. ಈ ಸಂದರ್ಭದಲ್ಲಿ ಲಿಂಗೈಕ್ಯ ಸ್ವಾಮಿಗಳವರ ಅಂತಿಮ ದರ್ಶನಕ್ಕಾಗಿ ಶ್ರೀ ಸಿದ್ಧಗಂಗಾ ಮಠಕ್ಕೆ ಆಗಮಿಸಿದ್ದವರು ಯುವಕರಾದ ವೀರಾಪುರದ ಶ್ರೀ ಶಿವಣ್ಣನವರು. ಅಂದಿನ ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕಿನ ವೀರಾಪುರ ಗ್ರಾಮದ ಪಟೇಲ್ ಹೊನ್ನಪ್ಪ ಮತ್ತು ಶ್ರೀಮತಿ ಗಂಗಮ್ಮನವರ ಹದಿಮೂರು ಮಕ್ಕಳ ಪೈಕಿ ಎಂಟನೆಯವರೇ ಶಿವಣ್ಣನವರು. ನಂತರ ಶ್ರೀ ಉದ್ದಾನ ಶಿವಯೋಗಿಗಳವರ ಆಶೀರ್ವಾದ ಪಡೆಯಲು ಭೇಟಿ ಮಾಡಿದಾಗ ಶ್ರೀಗಳವರು 'ಶ್ರೀಮಠದ ಮುಂದಿನ ಉತ್ತರಾಧಿಕಾರಿ ನೀನೇ ಶಿವಣ್ಣ' ಎಂದಾಗ ಮಾತಿಗೆ ಪ್ರತಿಯಾಡದೆ ಸಿದ್ಧಗಂಗಾ ಕ್ಷೇತ್ರದ ಸ್ವಾಮಿಗಳಾಗಲು ಒಪ್ಪಿಕೊಂಡು ಶ್ರೀ ಶಿವಕುಮಾರ ಸ್ವಾಮಿಗಳಾಗಿದ್ದು ಶ್ರೀಮಠದಲ್ಲಿ ಇತಿಹಾಸದಲ್ಲಿ ಮಹತ್ವದ ಸಂಗತಿ ಎನ್ನಬಹುದು. ಮನೆಯವರಿಗೆ ತಿಳಿಸದೆ, ಅವರ ಅನುಮತಿ ಪಡೆಯದೆ ೧೯೩೦ರಲ್ಲಿ ಸ್ವಾಮಿಗಳಾಗಿ, ಗುರುವಿನ ಮನಗೆದ್ದು ಮಠಾಧಿಪತಿ ಎನಿಸಿಕೊಂಡರು.

ಶ್ರೀ ಉದ್ದಾನ ಶಿವಯೋಗಿಗಳವರ ಕಠಿಣ ಕರ್ಮಯೋಗ ಹಾಗೂ ಶಿವಯೋಗಗಳ ಬಗೆಗೆ ಶ್ರೀ ಶಿವಕುಮಾರ ಸ್ವಾಮಿಗಳವರು ಸ್ಮರಿಸಿಕೊಳ್ಳುತ್ತಾ, ನಮ್ಮ ಸ್ವಾಮಿಗಳವರು 'ಕೊಟ್ಟರೆ ವರ, ಇಟ್ಟರೆ ಶಾಪ' ಎಂಬ ಮಾತುಗಳನ್ನು ಆಗಾಗ್ಗೆ ಹೇಳುತ್ತಿದ್ದರು. ಶ್ರೀ ಸಿದ್ಧಗಂಗಾ ಮಠದ ಉತ್ತರಾಧಿಕಾರವನ್ನು ವಹಿಸಿಕೊಂಡು ಎಂಭತ್ತೊಂಬತ್ತು ವರ್ಷಗಳ ಸಮರ್ಥ ಸಾರ್ಥಕ ಸಂನ್ಯಾಸ ಜೀವನವನ್ನು ಪವಿತ್ರವಾಗೇ ಉಳಿಸಿಕೊಂಡು ಮಾನವ ಜನಾಂಗದ ಹಿತವನ್ನು ಬಯಸಿದ ಮಹಾನುಭಾವರ ಮೇಲ್ಪಂಕ್ತಿಯಲ್ಲಿ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸಂಸ್ಥಾಪಿತರಾಗಿದ್ದಾರೆ. ಧಾರ್ಮಿಕ, ಸಾಮಾಜಿಕಮುಖಿಗಳಾದ ಶ್ರೀಗಳವರು ತಮ್ಮ ಅವಧಿಯಲ್ಲಿ ಸ್ಥಾಪಿಸಿ, ಪೋಷಿಸುತ್ತಿರುವ ಶಿಕ್ಷಣ ಸಂಸ್ಥೆಗಳ ಸಂಖ್ಯೆ ೧೨೫ಕ್ಕೂ ಹೆಚ್ಚಿವೆ. ೧೯೪೪ರಲ್ಲಿ ಶ್ರೀ ಸಿದ್ಧಗಂಗಾ ಪ್ರೌಢಶಾಲೆ ಸ್ಥಾಪಿಸುವುದರೊಂದಿಗೆ ಆರಂಭವಾದ ಸಂಸ್ಥೆಗಳು ಪೂರ್ವ ಪ್ರಾಥಮಿಕ ಶಾಲೆಯಿಂದ ಇಂಜಿನಿಯರಿಂಗ್, ಫಾರ್ಮಸಿ, ಬಿಜಿನೆಸ್ ಮ್ಯಾನೇಜ್ ಮೆಂಟ್ ಕಾಲೇಜುಗಳ ತನಕ ಎಲ್ಲಾ ಹಂತಗಳ ಶಿಕ್ಷಣ ಸಂಸ್ಥೆಗಳೂ ಶ್ರೀಮಠದ ವತಿಯಿಂದ ನಡೆಯುತ್ತಿವೆ.

ಸಿದ್ಧಗಂಗಾ ಶ್ರೀಗಳವರು ವೇದಿಕೆಯ ಮೇಲೆ ಕುಳಿತು ಉಪದೇಶವನ್ನು ಕೊಡುವುದರ ಬದಲಿಗೆ ತಾವೇ ಹೊಲದಲ್ಲಿ ಅಡುಗೆ ಮನೆಯಲ್ಲಿ, ಶಾಲೆಯ ಕೋಣೆಯಲ್ಲಿ, ಕಟ್ಟಡ ಕಟ್ಟುವ ನಿವೇಶನದಲ್ಲಿ ಇಳಿದು ಕೆಲಸ ಮಾಡಿ ದುಡಿಮೆಯ ಅಗ್ಗಳಿಕೆ ಯನ್ನು ಮೆರೆಸಿದ್ದಾರೆ. ಸಿದ್ಧಗಂಗಾ ಕ್ಷೇತ್ರದಲ್ಲಿ ಶ್ರೀಗಳವರು ನಡೆಸುತ್ತಾ ಬಂದಿರುವ 'ಅನ್ನದಾಸೋಹ' ಸೋಜಿಗ ಪಡೆಯುವಷ್ಟು ದೊಡ್ಡ ಪ್ರಮಾಣದಲ್ಲಿ ನಿರಂತರವಾಗಿ ನಡೆಯುತ್ತಾ ಬಂದಿರುವುದು ಒಂದು ಪವಾಡವೆನ್ನ ಬಹುದಾಗಿದೆ.

---

* ನಗರ್ಲೆ ಅಂಚೆ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ







ವಿದ್ಯಾರ್ಥಿಗಳ ಕ್ಷೇಮ ಚಿಂತನೆ ಶ್ರೀಗಳವರ ಮೊದಲ ಗುರಿಯಾಗಿತ್ತು. ಹಿಂದೆ ಶ್ರೀಮಠ ಆರ್ಥಿಕವಾಗಿ ದುರ್ಬಲವಾಗಿತ್ತು. ಧಾರ್ಮಿಕ ಕೊರತೆಯನ್ನಂತೂ ಸಿದ್ಧಗಂಗಾ ಮಠ ಕಂಡಿದ್ದೇ ಇಲ್ಲ. ಶ್ರೀಗಳವರು ಹತ್ತಾರು ಹಳ್ಳಿಗಳಿಗೆ ಹೋಗಿ ಭಿಕ್ಷೆ ತಂದು ಎಲ್ಲವನ್ನು ಸಲಹುತ್ತಿದ್ದರು. ಭಿಕ್ಷೆಗಾಗಿ ಒಂದು ತಿಂಗಳು ಪೂರ್ಣ ಮಲೆನಾಡಿಗೆ ಹೋಗಿ ವಾಸ್ತವ್ಯ ಹೂಡುತ್ತಿದ್ದ ದಿನಗಳೂ ಇದ್ದವು. ಅಂತಹ ಸಂದರ್ಭಗಳಲ್ಲೂ ಶ್ರೀಗಳವರು ಯಾವುದರಲ್ಲೂ ವಿದ್ಯಾರ್ಥಿಗಳಿಗೆ ಕೊರತೆಯುಂಟಾಗದಂತೆ ನೋಡಿಕೊಳ್ಳುತ್ತಿದ್ದರು. ಊಟ ಬಡಿಸುವ ವೇಳೆಯಲ್ಲಿ ತಾವೇ ಮುಕ್ತವಾಗಿ ಎಲ್ಲರಿಗೆ ಉಣಬಡಿಸಿದ್ದಾರೆ. ಅವರದು ಮಾತೃವಾತ್ಸಲ್ಯ, ತಂದೆ ತಾಯಿ ಎಲ್ಲವೂ ಅವರೇ ಆಗಿದ್ದರು. ಎಲ್ಲರನ್ನು ತಮ್ಮವನೆಂದು ಒಪ್ಪಿಕೊಂಡಿದ್ದರು. ಸಿದ್ಧಗಂಗಾ ಶ್ರೀಗಳು ಗುರುವಾಗಿ ನುಡಿದು ನಿಜದ ಜಂಗಮರಾಗಿ ನಡೆದು ಅಮರರಾಗಿದ್ದಾರೆ.

ಶ್ರೀಮಠದಲ್ಲಿ ವಿದ್ಯಾಭ್ಯಾಸಕ್ಕೆ ಸೇರಿದ ಕೆಲವು ವಿದ್ಯಾರ್ಥಿಗಳು ಶ್ರೀಗಳವರನ್ನು ಮಾತನಾಡಿಸಲು ಹೋಗುವುದಿರಲಿ, ಅವರ ಕಣ್ಣಿಗೆ ಬೀಳದಂತೆ ಎಚ್ಚರ ವಹಿಸಿದ್ದರೆ ಶ್ರೀಗಳವರೇ ವಿದ್ಯಾರ್ಥಿಗಳಿರುವ ಕೊಠಡಿಗಳಿಗೆ ಹೋಗಿ ಕ್ಷೇಮ ಸಮಾಚಾರಗಳನ್ನು ವಿಚಾರಿಸಿಕೊಂಡು, ಪಾಠಪ್ರವಚನಗಳ ಬಗೆಗೆ ತಿಳಿದುಕೊಂಡು, ಅವರೊಡನೆ ತಮಾಷೆ ಮಾಡುತ್ತಿದ್ದರು. ಪ್ರತಿದಿನ ಸಾಯಂಕಾಲ ಪ್ರಾರ್ಥನಾ ಮಂದಿರದಲ್ಲಿ ಎಲ್ಲರಿಗೂ ಪ್ರಸಾದವಾಣಿ ಲಭ್ಯವಾಗುತ್ತಿತ್ತು. ಶ್ರೀಗಳವರ ಉಪದೇಶಾಮೃತಗಳನ್ನು ಕೇಳುತ್ತಿದ್ದ ಸಿದ್ಧಗಂಗಾ ಕ್ಷೇತ್ರದಲ್ಲಿ ಓದಿದ ಸಹಸ್ರಾರು ವಿದ್ಯಾರ್ಥಿಗಳು ಇಂದು ನಾಡಿನ ಎಲ್ಲೆಡೆ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀಮಠದ ದನಕರುಗಳ ಪಾಲನೆ ಹಾಗೂ ಗಿಡಗಳನ್ನು ನೆಟ್ಟು ಬೆಳೆಸಿ ಪೋಷಿಸುತ್ತಿದ್ದವರು ಸುಬ್ಬಣ್ಣಜ್ಜ ಎಂಬುವರು. ಅವರು ಎಂತಹುದೇ ಸಂದರ್ಭದಲ್ಲಿ ಮರಗಿಡಗಳನ್ನು ಕತ್ತರಿಸಲೂ ಬಿಡುತ್ತಿರಲಿಲ್ಲವಂತೆ. ಅವರನ್ನು ನೋಡಿದ್ದ ಅನೇಕರು ಆತ ಪುಣ್ಯಜೀವಿಯೆಂದು ಸ್ಮರಿಸುತ್ತಾರೆ. ವಯಸ್ಸಾಗಿ ಮೃತ್ಯುಶಯ್ಯೆಯಲ್ಲಿ ಸುಬ್ಬಣ್ಣಜ್ಜ ಮಲಗಿದ್ದಾಗ ಶ್ರೀಗಳವರನ್ನು ನೋಡಲೇಬೇಕೆಂದು ಹಠ ಹಿಡಿದಿದ್ದರಂತೆ. ಆದರೆ ಆಗ ಶ್ರೀ ಶಿವಕುಮಾರಸ್ವಾಮಿಗಳವರು ಮಲೆನಾಡಿನ ಪ್ರವಾಸದಲ್ಲಿದ್ದರಂತೆ. ಪ್ರಾಣ ಹೋಗುವ ಕೆಲವು ಗಂಟೆಗಳ ಮುಂಚೆ ಶ್ರೀಗಳವರು ಬಂದರೇ ಎಂದು ಪ್ರಲಾಪಿಸುತ್ತಿದ್ದರಂತೆ. ಅದಾವ ಕಾರಣವೋ ಏನೋ ತಮ್ಮ ಪ್ರವಾಸವನ್ನು ಮೊಟಕುಗೊಳಿಸಿದ ಶ್ರೀಗಳವರು ಅಂದೇ ಶ್ರೀಮಠಕ್ಕೆ ಹಿಂದಿರುಗಿ, ವಿಷಯವರಿತು ಕೂಡಲೇ ಸುಬ್ಬಣ್ಣಜ್ಜ ವಾಸಸ್ಥಳಕ್ಕೆ ಧಾವಿಸಿ ಆಶೀರ್ವದಿಸಿದರಂತೆ. ನಂತರವೇ ಸುಬ್ಬಣ್ಣಜ್ಜನ ಕಣ್ಣುಮುಚ್ಚಿದರು. ಇಂತಹ ಸತ್ಯಸಂಗತಿಗಳು ಹಲವಾರು ಇವೆ. ಇದಕ್ಕೆಲ್ಲಾ ಶ್ರೀಗಳವರ ತತ್ತ್ವನಿಷ್ಠೆ, ಪೂಜೆ ಹಾಗೂ ತಪಸ್ಸಿನ ಫಲವೆನ್ನಬಹುದು.

ಶ್ರೀಗಳವರು ಪೂಜೆ ಮುಗಿಸಿ ಪ್ರಸಾದಕ್ಕಾಗಿ ಒಂದು ದಿನ ಹಳೇಮಠದಲ್ಲಿ ಕುಳಿತಿದ್ದಾರೆ. ಪೂಜಾಮರಿ ಸರಿಯಾದ ಸಮಯಕ್ಕೆ ಪ್ರಸಾದ ತರುವುದು ಕಾರಣಾಂತರಗಳಿಂದ ತಡವಾಯಿತು. ತಕ್ಷಣ ಎದ್ದು ತಮ್ಮ ವಸ್ತ್ರಧರಿಸಿ ಶ್ರೀಗಳವರು ಹೊರನಡೆದರು. ಪೂಜಾ ಕೊಠಡಿಯಿಂದ ಹೊರಕ್ಕೆ ವೇಗವಾಗಿ ಹೋಗುತ್ತಿದ್ದ ಶ್ರೀಗಳವರಲ್ಲಿ ಆ ಪೂಜಾಮರಿ ಪ್ರಾರ್ಥನೆ ಸಲ್ಲಿಸಿಕೊಂಡರೂ ಪೂಜ್ಯರ ಮನ ಬದಲಿಸಲಾಗಲಿಲ್ಲ. ಆಮೇಲೆ ಕಾರಣ ತಿಳಿಯಿತು. ಅಂದು ನಿಗದಿಯಾಗಿದ್ದ ಕಾರ್ಯಕ್ರಮದಂತೆ ಶ್ರೀಗಳವರು ದೂರದ ಊರಿನ ಸಮಾರಂಭವೊಂದರಲ್ಲಿ ಪಾಲ್ಗೊಳ್ಳಬೇಕಾಗಿತ್ತು. ದೂರದ ಆಯಾಸವನ್ನೂ ಲೆಕ್ಕಿಸದೆ, ಪ್ರಸಾದವನ್ನೂ ಸ್ವೀಕರಿಸದೆ ಪ್ರಯಾಣ ಬೆಳೆಸಿದ ಶ್ರೀಗಳು ಸಕಾಲದಲ್ಲಿ ಸಮಾರಂಭಕ್ಕೆ ಹಾಜರಾಗಿ ಅಂದೇ ಸಂಜೆ ಶ್ರೀಮಠಕ್ಕೆ ವಾಪಸ್ಸಾದರು. ಬೆಳಗಿನಿಂದ ರಾತ್ರಿಯ ತನಕ ಪ್ರಯಾಣ ಮಾಡಿ ಬಂದಿದ್ದರೂ ಯಾರ ಬಗ್ಗೆಯೂ ಯಾವುದರ ಬಗೆಗೂ ಬೇಸರಗೊಳ್ಳದಿದ್ದ ಅವರ ವ್ಯಕ್ತಿತ್ವ, ಆ ಪೂಜಾಮರಿಯ ಜೀವನದಲ್ಲಿ ಕಲಿಸಿದ ಪಾಠದಂತಿತ್ತು ಹಾಗೂ ಸಮಯ ಪರಿಪಾಲನೆಯಲ್ಲಿ ಎಚ್ಚರವಾಗಿರುವಂತೆ ಮಾಡಿತ್ತು.

ಶ್ರೀಮಠದಲ್ಲಿ ಇತರರು ಮಾಡಿದ ತಪ್ಪುಗಳಿಗೆ, ಅಪರಾಧಕ್ಕೆ ಶ್ರೀಗಳವರು ತಮ್ಮನ್ನು ಹೊಣೆಯಾಗಿಸಿಕೊಂಡು ಉಪವಾಸದ ಮೂಲಕವೋ ಅಥವಾ ಯಾವುದಾದರೊಂದು ರೂಪದಲ್ಲೋ ಶಿಕ್ಷೆಯನ್ನು ಕೊಟ್ಟುಕೊಳ್ಳುತ್ತಿದ್ದರು. ಮೈಸೂರಿನ ಅಂದಿನ ಮಹಾರಾಜರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್‌ರವರು ಸಿದ್ಧಗಂಗಾ ಮಠಕ್ಕೆ ಆಗಮಿಸಿ, ಪೂಜಾಕಾರ್ಯಗಳಲ್ಲಿ ಪಾಲ್ಗೊಂಡು ಪ್ರಸಾದ ಸ್ವೀಕರಿಸಿ ಶ್ರೀ ಶಿವಕುಮಾರಸ್ವಾಮಿಗಳವರೊಂದಿಗೆ ಮಾತನಾಡಿ, ಶ್ರೀಮಠದ ಬೆಳವಣಿಗೆಗೆ ಬೇಕಾದ ಸಹಾಯವನ್ನು ತಮ್ಮಿಂದ ಪಡೆದುಕೊಳ್ಳುವಂತೆ ತಿಳಿಸಿದಾಗ ಶ್ರೀಗಳವರು ಏನನ್ನೂ ಕೇಳಲಿಲ್ಲವಂತೆ. ಕಷ್ಟಗಳು ಬಂದಾಗ ದೇವರೇ ಅಂತಹ ಪರಿಸ್ಥಿತಿಗಳನ್ನು ಪರಿಹರಿಸುತ್ತಾನೆಂದು ಅಷ್ಟೇ ವಿನಯದಿಂದ ಮಹಾರಾಜರಿಗೆ ತಿಳಿಸಿದರಂತೆ. ಈ ಸಂದರ್ಭದಲ್ಲಿ ಮಹಾರಾಜರು ತುಂಬಾ ಸಂತೋಷ ವ್ಯಕ್ತಪಡಿಸಿದ್ದರು. ರಾಜಕಾರಣಿಗಳು, ಸರ್ಕಾರದ ಹಿರಿಯ ಅಧಿಕಾರಿಗಳು ಯಾರೇ ಬಂದರೂ ಅವರಿಂದ ಯಾವುದೇ







ಪ್ರತಿಫಲ ಅಪೇಕ್ಷಿಸದೆ ಅವರಿಗೆ ಪೂಜಾ ಪ್ರಸಾದದ ವ್ಯವಸ್ಥೆಯನ್ನು ಶ್ರೀಗಳವರು ಕಲ್ಪಿಸುತ್ತಿದ್ದರು.

ಶ್ರೀ ಮಲೆ ಮಹದೇಶ್ವರ ಬೆಟ್ಟದಲ್ಲಿ ೧೯೬೫ನೇ ಇಸವಿಯಲ್ಲಿ ನಡೆದ ಧಾರ್ಮಿಕ, ಸಾಂಸ್ಕೃತಿಕ ಕಾಯಕ್ರಮಕ್ಕೆ ಮೈಸೂರು ಮಹಾರಾಜರು ಹಾಗೂ ಸಿದ್ಧಗಂಗಾ ಶ್ರೀಗಳು ಮತ್ತು ಇತರೆ ಗಣ್ಯರು ಪಾಲ್ಗೊಂಡಿದ್ದರು. ಸಮಾರಂಭ ಮುಗಿಸಿಕೊಂಡು, ಹಿಂದಿರುಗುತ್ತಿರುವಾಗ ಕಾಮಗೆರೆ ಗ್ರಾಮದಲ್ಲಿ ಮಹಾರಾಜರನ್ನು ನೋಡುವ ಸಲುವಾಗಿ ರಸ್ತೆಯ ಎರಡು ಬದಿಯಲ್ಲಿ ಬಹುಜನಸಂದಣಿಯೇ ಸೇರಿತ್ತು. ಶ್ರೀಗಳವರ ಕಾರು ಬರುತ್ತಿರುವ ಸಂದರ್ಭದಲ್ಲಿ ಒಬ್ಬ ಬಾಲಕ ಅಡ್ಡಲಾಗಿ ಓಡುವಾಗ ಕಾರಿಗೆ ಢಿಕ್ಕಿಯಾಗಿ ಗಾಯಗೊಂಡಿದ್ದ. ಚಾಲಕ ಕಾರು ನಿಲ್ಲಿಸದೆ ಹೋಗುತ್ತಿದ್ದುದನ್ನು ಗಮನಿಸಿದ ಶ್ರೀಗಳು ತಕ್ಷಣವೇ ಕಾರು ನಿಲ್ಲಿಸುವಂತೆ ಸೂಚಿಸಿ, ವಾಹನದಿಂದ ಕೆಳಗಿಳಿದು ಆ ಹುಡುಗನಿಗೆ ಧೈರ್ಯ ಹೇಳಿ, ತಮ್ಮ ಕಾರಿನಲ್ಲಿ ಆ ಹುಡುಗನನ್ನು ಕೊಳ್ಳೇಗಾಲದ ಆಸ್ಪತ್ರೆಗೆ ಕರೆತಂದು ಚಿಕಿತ್ಸೆ ಕೊಡಿಸಿ, ಯೋಗಕ್ಷೇಮವನ್ನು ತಿಳಿದು ಆಶೀರ್ವದಿಸಿ, ನಂತರ ತಮ್ಮ ಪ್ರಯಾಣವನ್ನು ಮುಂದುವರಿಸಿದರು. ಇಂತಹ ಸಾವಿರಾರು ನಿದರ್ಶನಗಳನ್ನು ಪೂಜ್ಯರ ಜೀವನದಲ್ಲಿ ಕಾಣಬಹುದಾಗಿದೆ.

ಸಿದ್ಧಗಂಗೆಯ ಮಹಾಸಾಧಕರಾಗಿದ್ದ ಶ್ರೀಗಳವರು ಈ ತಲೆಮಾರಿನ ಜನರ ಮೇಲೆ ಬೀರಿರುವ ಪ್ರಭಾವ ಅಗಾಧ. ಅವರ ಸಾಧಕ ಬದುಕು, ಧಾರ್ಮಿಕ ಇತಿಹಾಸದ ಒಂದು ದೊಡ್ಡ ಅಧ್ಯಾಯ. ಕಾಯಕ ಮತ್ತು ದಾಸೋಹಕ್ಕಾಗಿ ಇಡೀ ಜೀವನವನ್ನು ಈಶ ಸೇವೆಗಾಗಿ ಮುಡಿಪಾಗಿಟ್ಟಿದ್ದ ಪೂಜ್ಯರು ಮಾನವ ಲೋಕದ ಸಮಸ್ತರ ಕಲ್ಯಾಣಕ್ಕಾಗಿ ಶ್ರಮಿಸುತ್ತಾ ಬಂದು ನೂರ ಹನ್ನೊಂದು ವರುಷಗಳ ಪರಮ ಸಾರ್ಥಕ ಜೀವನವನ್ನು ನಡೆಸಿ ನಡೆದಾಡುವ ದೇವರೆಂದೇ ಪ್ರಸಿದ್ಧರಾಗಿದ್ದ ಸಿದ್ಧಗಂಗೆಯ ನಿಜದ ಜಂಗಮರಾದ ಕರ್ನಾಟಕ ರತ್ನ ಪರಮಪೂಜ್ಯ ನಿ.ಪ್ರ.ಸ್ವ. ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ೨೧ ಜನವರಿ ೨೦೧೯ರಂದು ಶಿವನಡೆಗೆ ನಡೆದುದು ಧಾರ್ಮಿಕ ಶ್ರೀಮಠದ ಇತಿಹಾಸದಲ್ಲಿ ಮರೆಯಲಾಗದ ದಿನ.

ಸಕಲ ಜೀವಗಳ ಲೇಸನ್ನೇ ಬಯಸುತ್ತಾ ಜಗತ್ತಿನ ಶಾಂತಿಗೆ, ಸಮಾಜದ ಸರ್ವೋದಯಕ್ಕೆ, ಕಾಯಕ, ದಾಸೋಹ, ಜ್ಞಾನ ಸಂಚನವೇ ಶಕ್ತಿ ಎಂಬುದನ್ನು ಎಲ್ಲರಿಗೂ ಉಣಬಡಿಸಿದ್ದ ಮಹಾದಾಸೋಹಿ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ಶ್ರೀಗಳವರಿಂದಾಗಿ ಇಂದು ಸಿದ್ಧಗಂಗೆ ಮತ್ತು ಶ್ರೀಮಠ ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರುವಾಸಿಯಾಗಿದೆ. ಪೂಜ್ಯರ ಸಂದೇಶದಲ್ಲಿ ಸಹಜತೆ, ಸಂವಹನ ಪ್ರೀತಿ ಹಾಗೂ ನಿರ್ಮಲ ಅಂತಃಕರಣ ಇದ್ದಿದ್ದರಿಂದಲೇ 'ನಡೆದಾಡುವ ದೇವರು' ಎಂಬ ಹೆಸರಿಗೆ ಅನ್ವರ್ಥವಾಗಿದ್ದರು. ಮಾತನಾಡುವ ದೇವರೆಂದೇ ಜನರ ವಿಶ್ವಾಸ, ಭಕ್ತಿಯನ್ನು ಗಳಿಸಿಕೊಂಡಿದ್ದರು. ತ್ಯಾಗ, ಭಕ್ತಿ, ಶ್ರದ್ಧೆ, ಸೇವಾಮನೋಭಾವನೆಯಿಂದ ಮಾವನ ಮಹಾತ್ಮನಾಗಬಲ್ಲ ಎಂಬುದಕ್ಕೆ ಸಿದ್ಧಗಂಗಾ ಶ್ರೀಗಳು ಜೀವಂತ ಸಾಕ್ಷಿಯಾಗಿದ್ದರು. ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಉತ್ತರಾಧಿಕಾರಿಯಾಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು ೧೯೮೮ರ ಮಾರ್ಚ್ ೩೧ರಂದು ನೇಮಕಗೊಂಡರು. ೨೦೧೨ಕ್ಕೆ ಹಿರಿಯ ಶ್ರೀಗಳವರಿಂದ ಅಧಿಕಾರವನ್ನು ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳವರು ಸ್ವೀಕರಿಸಿ, ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಮಾರ್ಗದರ್ಶನದಂತೆ ಶ್ರೀಮಠ ಹಾಗೂ ಶಿಕ್ಷಣ ಸಂಸ್ಥೆಗಳನ್ನು ಇಂದು ಮುನ್ನಡೆಸಿಕೊಂಡು ಬರುತ್ತಿದ್ದಾರೆ.

## ಸಿದ್ಧಗಂಗಾ ಮಾಸಪತ್ರಿಕೆ

**ಮಹಾಪೋಷಕರು : (ಹತ್ತು ಸಾವಿರ ರೂ.ಗಳು)**

೧. ಶ್ರೀ ಬಿ.ಎಂ. ಗೌರಪ್ಪ, ವಿದ್ಯಾರಣ್ಯಪುರ,
ಬೆಂಗಳೂರು-೫೬೦೦೯೭

೨. ಶ್ರೀ ಕೆ.ಆರ್. ವಿಜಯಕುಮಾರ್
S/o ಶ್ರೀ ಸಿ.ಕೆ. ಸಿದ್ಧಪ್ಪ,
ಕುಮಾರ್ ಜ್ಯೂಲೆರ್ಸ್ & ಜವಳಿ ಶಾಪ್,
ಮಂಡಿಪೇಟೆ, ದಾವಣಗೆರೆ

**ಪೋಷಕರು : (ಐದು ಸಾವಿರ ರೂ.ಗಳು)**

೧. ಶ್ರೀ ಸಿ.ಎಂ. ಬಸವರಾಜಯ್ಯ,
S/o ಶ್ರೀ ಸಿ. ಕೊಟ್ರಯ್ಯ, ಸರಸ್ವತಿನಗರ
ದಾವಣಗೆರೆ

೨. ಶ್ರೀ ಕೆ. ಚಂದ್ರಪ್ಪ
S/o ಶ್ರೀ ಈಶ್ವರಪ್ಪ, ಜಾಕಳ್ಳಿ,
ದಾವಣಗೆರೆ

ಸಂಶೋಧನಾ ಲೇಖನ

# ಕರ್ಮಸುಜ್ಞಾನ ಶಿವಯೋಗಿ ಶಾಸನೋಕ್ತ ಪರಮಾರಾಧ್ಯ ಸಿದ್ಧರಾಮ

- ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*

ಸಿದ್ಧಗಂಗೆ, ದೇವರಾಯಪಟ್ಟಣ, ಕುಂದೂರು ಸ್ಥಳದ ೩ ಮೈಲಿ ಆಚೆಗೆ ಪ್ರಸಿದ್ಧ ಸಿದ್ಧರಾಮೇಶ್ವರರ ೭೫ನೇ ಮಹಾ ಗದ್ದುಗೆ ಕ್ಷೇತ್ರವಾದ ಬೆಳಗುಂಬ, ಗ್ರಾಮವು ಸಿಗುತ್ತದೆ. ಇಲ್ಲಿಗೆ ತುಮಕೂರಿನಿಂದ ಬಸ್ಸಿನ ಸೌಕರ್ಯ ಅನುಕೂಲಕರವಾಗಿದೆ.

ಶ್ರೀ ಸಿದ್ಧರಾಮಶಿವಯೋಗಿಯು ಕಾಶಿ, ಗೋಕರ್ಣ, ಸ್ಕಂದಾಚಲಾದಿ ಶಿವಕ್ಷೇತ್ರಗಳನ್ನು ಸಂದರ್ಶಿಸಿ ಶಿವಗಂಗೆಗೆ ಬಂದರು. ಅಲ್ಲಿಂದ ಭದ್ರಾಚಲಕ್ಕೆ ಬಂದು ಶ್ರೀ ವೀರಭದ್ರನು ತೇಜೋಮಯನಾಗಿ ರುದ್ರಭೂಪತಿಗೆ ದರ್ಶನವಿತ್ತ ನೆಲೆ ಬೆಳಗುಂಬಕ್ಕೆ (ದ್ಯುತಿನಾಮಕಪುರ) ಬಂದರು. ಶ್ರೀ ಸಿದ್ಧರಾಮೇಶ್ವರರು ಇಲ್ಲಿ ಶಿವಯೋಗಕ್ಕೆ ಯೋಗ್ಯ ಸ್ಥಾನವೆಂದು ಗ್ರಾಮವನ್ನು ನಿರ್ಮಿಸಿದರಂತೆ; ಮಠವನ್ನು ಕಟ್ಟಿದರಂತೆ. ಭದ್ರಗಿರಿ (ಭದ್ರಾಚಲ)ಯಲ್ಲಿ ಅವರ ನಿತ್ಯಸಂಚಾರವಿತ್ತು. ಒಂದು ದಿನ ನಿರ್ಗುಣ ಪರಶಿವನನ್ನು ಸಗುಣರೂಪದಲ್ಲಿ ಕಾಣಬೇಕೆಂದು ಪ್ರಾರ್ಥಿಸಿದರು. ಆಗ ಪರಶಿವನು ಜಟಾಂತರ್ಗತ ಶ್ರೀ ಗಂಗೆಯ ಒಂದು ಬಿಂದುವನ್ನು ಸ್ಥಾಪಿಸಲಾಗಿ ಅದು ರುದ್ರತೀರ್ಥವೆಂದು ಹೆಸರಾಯಿತು. ಆ ತೀರ್ಥದಲ್ಲಿ ಮಿಂದು ಸಿದ್ಧರಾಮೇಶ್ವರರ ತ್ರೈಲಿಂಗೇಶ್ವರನನ್ನು ಅರ್ಚಿಸಿದರು. ನಂತರ ಪರ್ವತಾಗ್ರಕ್ಕೆ ಬಂದು ನಮಿದು ಬಂಡೆಯ ಮೇಲೆ ಪಾದ ಊರಿ ನಿಂತರು. ಬೆಟ್ಟದ ಮೇಲಿರುವ ಆ ಪಾದದ ಕುರುಹು ಇಂದೂ ಕಾಣುತ್ತಿದೆ. ಅದು ಸಿದ್ಧರಾಮೇಶ್ವರ ಪಾದ ಎಂದೇ ಭಕ್ತರು ಆರಾಧಿಸುತ್ತಾರೆ. ನಂತರ ಬಂಡೆಯ ಮೇಲೆ ಶಿವಯೋಗ ನಿದ್ರಾಮುದ್ರಿತರಾಗಿ ಶಯನಿಸಿದರು. **ಅಕರೊತ್ತುಯದಾ ವಾಸಸ್ಸಿದ್ದರಾಮಹಾ ಯೋ ಗುರುಃ ತದಾರಭ್ಯಗಿರೇರ್ನಾಮ ಸಿದ್ಧರಾಮಾಚಲಹೃದಯೇ** ಎಂಬ ಪ್ರಮಾಣಕ್ಕನುಗುಣವಾಗಿ ಈ ಗಿರಿಗೆ ಅಂದಿನಿಂದ 'ಸಿದ್ಧರಾಮಾಚಲ' ಎಂಬ ಹೆಸರು ಬಂತು. ರುದ್ರಸಖನೆಂಬ ದೊರೆಯು ಪತ್ನಿ ಸಮೇತನಾಗಿ ರುದ್ರತೀರ್ಥಸ್ನಾನ ಮಾಡಿ ಸಂತಾನಪ್ರಾಪ್ತಿಗೊಂಡನಂತೆ, ಎಂದೆಲ್ಲ ಸ್ಥಳಪುರಾಣದ ಲೇಖನವಿದೆ. *

*** (ತುಮಕೂರು ತಾ. ರಾಮಗೊಂಡನಹಳ್ಳಿ ಮಠದ ವೇ॥ ಆರ್.ಎಸ್. ಸಿದ್ಧರಾಮಶಾಸ್ತ್ರಿ ಅವರ ಲೇಖನದ ಮಾಹಿತಿ)**

ಈ ಕ್ಷೇತ್ರದಲ್ಲಿ ಪ್ರತಿವರ್ಷ ಮಕರಸಂಕ್ರಾತಿಯ ಉತ್ತರಾಯ ಪುಣ್ಯಕಾಲದಿಂದ ಮೂರುದಿವಸ ಶ್ರೀ ಸಿದ್ಧರಾಮೇಶ್ವರ ಜಯಂತಿ ಜಾತ್ರಾ ಮಹೋತ್ಸವವು ನಡೆಯುತ್ತದೆ. ಮೂರು, ಐದು, ಏಳು ವರ್ಷಗಳಿಗೊಮ್ಮೆ 'ಶ್ರೀಮಹಾಜಾತ್ರೆ' ಐದು ದಿನಗಳ ಕಾಲ ದಾಸೋಹ ಸಹಿತವಾಗಿ ನಡೆಯುತ್ತದೆ. ಶ್ರೀ ಗುರು ಸಿದ್ಧರಾಮೇಶ್ವರರ ೮೫೧ನೇ ಜಾತ್ರಾ ಮಹೋತ್ಸವವು. ೧೫-೧೦-೨೦೧೨ನೇ ಭಾನುವಾರದಿಂದ ಆರಂಭಿಸಿ ೧೭-೦೧-೨೦೧೨ ರ ಮಂಗಳವಾರದವರೆಗೆ ನಡೆಯಿತು.

(ಮೊದಲ ದಿನ ಶ್ರೀ ಶಿವಯೋಗಿ ಸಿದ್ಧರಾಮಸ್ವಾಮಿಗಳ ನೇತೃತ್ವದಲ್ಲಿ ಮಹಾಗಣಪತಿ ಪೂಜಾ, ಧ್ವಜಾರೋಹನ ಕಾರ್ಯಗಳು ಬೆಳಗಿನ ೧೧-೩೦ ರಿಂದ ೧೨-೩೦ ರವರೆಗೆ ನಡೆದುವು. ಪ್ರಧಾನ ಅರ್ಚಕ ಶ್ರೀ ಶಾಂತಮಲ್ಲೇಶಯ್ಯನವರ ನೇತೃತ್ವದಲ್ಲಿ ಆಗಮೋಕ್ತ ವಿಧಿವಿಧಾನಗಳು ಆಡಳಿತಾಧಿಕಾರಿ ಶ್ರೀ ಜಯಪ್ರಕಾಶ್ ನಾರಾಯಣ್ ಅವರ ಹಾಜರಿಯಲ್ಲಿ ಸಾಂಗವಾಗಿ ನೆರವೇರಿದುವು).

ಧ್ವಜಾರೋಹಣದ ನಂತರ ಮಧ್ಯಾಹ್ನ ಸುಮಾರು ಮೂರು ಗಂಟೆಯ ವೇಳೆಗೆ ಅರ್ಚಕ ಶ್ರೀ ರಾಜಶೇಖರಯ್ಯ ಅವರು ಸಹಾಯಕರೊಡನೆ ಕುಂಭಗಳು, ಪತ್ರಪುಷ್ಪ, ಗಂಧ, ಹೊಂಬಾಳೆ ಇತ್ಯಾದಿ ಪೂಜಾ ಪರಿಕರಗಳೊಂದಿಗೆ ಸಿದ್ಧರಾಮೇಶ್ವರ ದೇಗುಲ ಪ್ರದಕ್ಷಿಣೆಯನ್ನು ಕರಡಿ ಮಜಲು ವಾದ್ಯದೊಡನೆ ಬರುತ್ತಾರೆ. ನಂತರ ಸಿದ್ಧರಾಮಾಚಲದ ಬುಡಕ್ಕಿರುವ ಮುಕ್ಕಾಲು ಮೈಲಿ ದೂರದ ರುದ್ರತೀರ್ಥ ದತ್ತ ಸಹಚರರೊಡನೆ ಯಾತ್ರಾರ್ಥಿಗಳೊಡನೆ ಸಾಗುತ್ತಾರೆ. ಆ ರುದ್ರತೀರ್ಥವೊಂದು ಸುಂದರವಾದ ತೊಟ್ಟಿಲ ಕೊಳ. ನಿರಂತರ ಜಲ ಒಸರಿನ ಹರಿವಿನ ತೀರ್ಥನೆಲೆ. ಇಲ್ಲಿ ನಾಲ್ಕು ಕುಂಭಗಳಲ್ಲಿ ತೀರ್ಥಜಲವನ್ನು ತುಂಬಿಕೊಂಡು ಗಂಗಾಪೂಜೆಯನ್ನು ಸಾಂಗವಾಗಿ ಪುಷ್ಪ, ಗಂಧ, ಹೊಂಬಾಳೆ, ನೆನೆದ ಹೆಸರುಬೇಳೆ ನೇವೇದ್ಯದೊಡನೆ ನೆರವೇರಿಸುತ್ತಾರೆ. ಅರ್ಧಮೈಲಿ ಕಡಿದು ದಾರಿಯಲ್ಲಿ ಸಾಗಿ ಬಂಡೆಯ ಕೆಳಗೆ ಆಸರೆಯಲ್ಲಿರುವ 'ತ್ರಿಲಿಂಗೇಶ್ವರ' ನೆಲೆಗೆ ಬರುತ್ತಾರೆ. ಈ ತ್ರಿಲಿಂಗೇಶ್ವರ ಮೂರು ಅರೆ ಗೋಳಾಕಾರ ರುದ್ರಭಾಗ (ಬಾಣ) ಮಾತ್ರ ಇರುವ ಚೌಕಟ್ಟಿನೊಳಗಣ ಲಿಂಗಾಕೃತಿಗಳಾಗಿವೆ. ಹಿಂಬದಿ ಒಂದು ಲಿಂಗ ಶಿರ, ಮುಂಬದಿ ಎರಡು ಲಿಂಗಶಿರವಿದ್ದು, ಜಲಹರಿಯ ಚೌಕಟ್ಟನ್ನು ಹೊಂದಿದೆ. ಇಲ್ಲಿ ರುದ್ರತೀರ್ಥದಿಂದ ತಂದ ಗಂಗಾಜಲದಿಂದ ಅಭಿಷೇಕ ನಡೆಯುತ್ತದೆ. ಎಂದಿನಂತೆ ಪುಷ್ಪ, ಗಂಧ ಹೊಂಬಾಳೆ, ತೆಂಗು ನೆನೆದ ಹೆಸರುಬೇಳೆ ನೈವೇದ್ಯವಿಟ್ಟು, ಸಂಕಲ್ಪ ಹೇಳಿ ಪೂಜಾದಿಗಳು ನಡೆಯುತ್ತದೆ. ಇಲ್ಲಿ ಪೂಜೆ ಮುಗಿಸಿ ಸಿದ್ಧರಾಮಾಚಲದ ತುದಿಗೆ ಸಾಗಬೇಕು.

ಸುಮಾರು ಒಂದುವರೆಮೈಲಿ ಕಡಿದಾದ ಏರಿಳಿತದ ಬಂಡೆಗಳ ಕುರುಚಲು ಗಿಡಗಳ ಹಾದಿಯಲ್ಲಿ ಸಾಗಿ ತಲುಪಿ, ಸಿದ್ಧರಾಮೇಶ್ವರರ ಉತ್ತರಮುಖಿ ಪಾದಚಿಹ್ನೆಗಳಿಗೆ ಪೂಜೆ ನಡೆಸುತ್ತಾರೆ. ತೀರ್ಥಜಲ, ಕ್ಷೀರಗಳಿಂದ ಅಭಿಷೇಕ, ಗಂಧ, ಪುಷ್ಪ, ಅರಿಶಿನ, ಕುಂಕುಮ, ಹೊಂಬಾಳೆ, ವಸ್ತ್ರಗಳಿಂದ ಪೂಜಿಸಿ ಆರತಿ ಎತ್ತಿ, ನೆನೆಸಿದ ಹೆಸರುಬೇಳೆ, ಬಾಳೆ, ತೆಂಗು ನೈವೇದ್ಯ ಮಾಡುತ್ತಾರೆ. ಯಾತ್ರಾರ್ಥಿಗಳಿಗೆ ಪ್ರಸಾದ ಹಂಚುತ್ತಾರೆ. ನಂತರ ತುಸು ಸನಿಹಕ್ಕಿರುವ ಇಳಿಜಾರು ಬಂಡೆಯ ಮೇಲೆ ಸುಮಾರು ೫೦ ಅಡಿ ಉದ್ದ ೩೦ ಅಡಿ ಅಗಲದ ಸಿದ್ಧರಾಮೇಶ್ವರರ ರೇಖಾಚಿತ್ರಕ್ಕೆ ಅಭಿಷೇಕ ಪೂಜಾದಿಗಳು ಆರತಿಸಹಿತ ಅರ್ಚಕರು ನಡೆಸುತ್ತಾರೆ.

ಆ ಹೊತ್ತಿಗೆ ಸಂಜೆ ೬ ಗಂಟೆ. ಈ ಚಿತ್ರದ ಸಂಕೇತವೆಂದರೆ ಸಿದ್ಧರಾಮೇಶ್ವರರು ಯೋಗ ನಿದ್ರೆಯಲ್ಲಿದ್ದ ಕುರುಹು ಎಂದು ಶ್ರದ್ಧಾನ್ವಿತ ಪೂಜಾ ಆಚರಣೆ ಆಗಿದೆ. ಈ ರೇಖಾಚಿತ್ರವನ್ನು ಬಲಗೈಯಲ್ಲಿ ತ್ರಿಶೂಲ, ಎಡಗೈಯಲ್ಲಿ ಡಮರು, ಕಂಕುಳಬದಿಗೆ ಬಸವನ ಚಿತ್ರವೂ ಸೇರಿದಂತೆ ಬಿಡಿಸಲಾಗಿದೆ. ಈ ರೇಖಾಚಿತ್ರದ ಎಡಬದಿಗೆ ತುಸು ದೂರದಲ್ಲಿ ೨೦೦ ಅಡಿ ಆಚೆ ಬಂಡೆ ತುದಿಯಲ್ಲಿ ಸುಮಾರು ೨೦ ಅಡಿ ಎತ್ತರದ ದೀಪಸ್ತಂಭವಿದೆ. ಸ್ತಂಭದ ಮೇಲೆ ಮೃಣ್ಮಯ ಕುಂಭವಿದೆ. ಕಡೆ ಕಾರ್ತೀಕ ಸೋಮವಾರದಂದು ಇಲ್ಲಿಗೆ ಬಂದು ಎಂದಿನಂತೆ ಸಿದ್ಧರಾಮರ ಚಿತ್ರವನ್ನು ಪೂಜಿಸಿ ಗಂಧದ ಚಕ್ಕೆಗಳನ್ನು ಆ ಕುಂಭಕ್ಕೆ ಹಾಕಿ ಉರಿಸಿ ಜ್ಯೋತಿ ಮಾಡುತ್ತಾರೆ. ಮಕರ ಸಂಕ್ರಾಂತಿ ಪೂಜೆ ಮುಗಿಸಿ ಕೆಳಗಿಳಿದು ದೇಗುಲ ಪ್ರದಕ್ಷಿಣೆ ಬಂದು ಸಿದ್ಧರಾಮೇಶ್ವರ ಗದ್ದುಗೆಗೆ ವರದಿ ಒಪ್ಪಿಸುತ್ತಾರೆ. ಇವು ಮೊದಲನೇ ದಿನದ ಸಂಜೆಯವರೆಗಿನ ಜಾತ್ರೆಯ ಆಚರಣೆಗಳು. ಬೆಳಗುಂಬ ಸಿದ್ಧರಾಮೇಶ್ವರ ದೇಗುಲವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ.

ದೇಗುಲದ ಗರ್ಭಗೃಹದಲ್ಲಿ ಸಿದ್ಧರಾಮೇಶ್ವರರ ಗದ್ದುಗೆ ಇದ್ದು ಪಶ್ಚಿಮಮುಖಿ ಆಗಿದೆ. ದಕ್ಷಿಣಮುಖದ ಉತ್ಸವಮೂರ್ತಿ ಲೋಹದ ಮೂರ್ತಿಯಾಗಿದೆ. ಗದ್ದುಗೆಯ ಮೇಲೆ ಲಿಂಗವಿದೆ. ವೀರಭದ್ರನ ಹಲಗೆಯೂ ಇದೆ. ಕಾರಣ ಸಿದ್ಧರಾಮೇಶ್ವರರು ಮತ್ತು ವೀರಭದ್ರಾವತಾರಿ ಮಡಿವಾಳ ಮಾಚಯ್ಯ ಜೊತೆಯಲ್ಲಿ ಇಲ್ಲಿಗೆ ಬಂದವರಂತೆ. ಈ ಕತೆಗೆ ಪೂರಕವಾಗಿ ಬೆಳಗುಂಬದಿಂದ ಉತ್ತರಕ್ಕೆ ಎರಡು ಮೈಲಿ ಸಾಗಿದರೆ ಗವಿವೀರಭದ್ರನ ಗುಹೆ ಕಾಣುತ್ತದೆ. ಅಲ್ಲಿ ಪಾಣಿವಟ್ಟಸಹಿತ ಚೌಕವೇದಿಕೆಗೆ ಹೊಂದಿಕೊಂಡಂತೆ ನೀಳ ಶಿವಲಿಂಗವಿದೆ. ಸುಮಾರು ೨ ಅಡಿ ಎತ್ತರ ಮುಕ್ಕಾಲು ಅಡಿ ವ್ಯಾಸದ್ದಾಗಿ ಛತ್ರಾಕಾರದ ಶಿರದ ಲಿಂಗವಾಗಿದೆ. ಆ ಗವಿಯಲ್ಲಿ ಮೂವರು ಯತಿಗಳ ವಾಸ್ತವ್ಯವಿತ್ತು ಎನ್ನಲಾಗಿದೆ. ನಂದಿಯು ಗವಿ ವೀರಭದ್ರನ ಎದುರಿಗಿದ್ದು, ನಿಧಿ ಅಸೆಬುರುಕರು ಆ ಜಾಗವನ್ನು ತೋಡಿಹಾಕಿದ್ದಾರೆ.

ಗವಿ ವೀರಭದ್ರನು ಬಂಡೆಯ ಮೇಲೆ ಉಬ್ಬು ಶಿಲ್ಪವಾಗಿದ್ದಾನೆ. ಚತುರ್ಭುಜನಾದ ಇವನ ಹಿಂಗೈಗಳಲ್ಲಿ ಬಾಣ, ಬಿಲ್ಲುಗಳಿವೆ. ಮುಂಬಲಗೈ ಖಡ್ಗ, ಎಡಗೈ ಢಾಲು ಹಿಡಿದಿದೆ. ಬಲಮಂಡಿ ಬಳಿ ದಕ್ಷನಿದ್ದಾನೆ. ವಿಶೇಷವೆಂದರೆ ಕಿರೀಟ ಭಾಗವು ಎರಡು ಗೋಳದಂತೆ ವೃತ್ತ ಭಾಗವಾಗಿ ಮಧ್ಯೆ ಪೂರಿತ (ಮುಂಬದಿ ಕೇಂದ್ರ) ಭಾಗದಲ್ಲಿ ಶಿವಲಿಂಗದ ಶಿಲ್ಪವನ್ನು ಕೆತ್ತಲಾಗಿದೆ.

ಈ ಗವಿಯಿಂದ ಎಡಬದಿಗೆ ನೋಡಿದರೆ ಸಿದ್ಧರಾಮಾಚಲ ಭದ್ರಾಚಲ ಜೋಡಿ ಕಾಣುತ್ತದೆ. ಹಿಂಬದಿಗೆ ದೇವರಾಯನದುರ್ಗಕ್ಕೆ ಹೊಂದಿಕೊಂಡ

* ನಂ. ೩೨೧, "ಶ್ರೀ ಜಚನಿ ಕೃಪ" ೭ನೇ ಅಡ್ಡರಸ್ತೆ, ರಾಜಾಜಿನಗರ, ಬೆಂಗಳೂರು-೫೬೦೦೧೦





ಗಿರಿಶ್ರೇಣಿ ಇದ್ದು ನರಸಿಂಹನು ತೇರಿನಲ್ಲಿ ಬೆಳಗುಂಬದಿಂದ ಅಲ್ಲಿಗೆ ಹೋದ ಕತೆ ಇದೆ.

ಮಡಿವಾಳ ಮಾಚಯ್ಯನನ್ನು ಪ್ರತಿನಿಧಿಸುವ ಶಿಲ್ಪವಾಗಿ ಈ ಗವಿ ವೀರಭದ್ರ ಹಾಗೂ ಶಿವಲಿಂಗಕ್ಕೆ ಸಂಕ್ರಾಂತಿ ಹಾಗೂ ಇತರೇ ಹಬ್ಬ ಹರಿದಿನಗಳಲ್ಲಿ ಪೂಜಾರಾಧನೆ ಇದೆ. ಗ್ರಾಮದೇವತೆಯಾಗಿ ಮಣ್ಣು ಮರದಿಂದ ಮಾಡಿದ ವಿಗ್ರಹ ಮುಚ್ಚಂದಮ್ಮ ಸಿದ್ಧರಾಮನ ದರ್ಶನಕ್ಕೆ ಜಾತ್ರಾ ಸಮಯದಲ್ಲಿ ಬಂದು ಹೋಗುತ್ತದೆ. ೧೫ನೇ ತಾ. ೧೬ನೇ ಸೋಮವಾರ ರಾತ್ರಿ ರಥೋತ್ಸವ ನಡೆಯುತ್ತದೆ. ಉತ್ಸವಮೂರ್ತಿ ಸಿದ್ಧರಾಮರು ಮಾತ್ರ ಇರುತ್ತದೆ. ವೀರಗಾಸಿಗಳು ಬಂದು ಸಿದ್ಧರಾಮೇಶ್ವರರ ಮಹಿಮೆಯನ್ನು ಸೇರಿಸಿಕೊಂಡು ವಡಬು ಹೇಳುತ್ತಾರೆ. ಚೊಂಬಿನಲ್ಲಿ ಅಕ್ಕಿ ಹಾಕಿ ಖಡ್ಗವನ್ನು ಅದರ ಬಾಯಿಗಿಟ್ಟು ಒಂದು ಕಾಳೂ ಬೀಳದಂತೆ ತಿರುಗಿಸುವ ಕೌಶಲ ತೋರುತ್ತಾರೆ. ಹರಕೆ ಹೊತ್ತವರು ನೀರುಮಡಿಯಲ್ಲಿ ಹೆಜ್ಜೆ ನಮಸ್ಕಾರ ಹಾಕುತ್ತಾರೆ. ತೀರ್ಥೋತ್ಸವವು ನಡೆಮುಡಿಯೊಂದಿಗೆ ಮಹಾರಥೋತ್ಸವ ನಡೆಯುತ್ತದೆ. ೧೭ನೇ ಮಂಗಳವಾರದಂದು ಮಹಾರುದ್ರಾಭಿಷೇಕ, ಶಿವಾಷ್ಟೋತ್ತರ ಶತನಾಮಾವಳಿ, ಪುಷ್ಪಾರ್ಚನೆ ಇತ್ಯಾದಿ ಸೇವೆಗಳು ಆಗಮೋಕ್ತವಾಗಿ ನಡೆಯುತ್ತವೆ. ಅಂದು ಗವಿವೀರಭದ್ರನ ಗುಹೆಗೆ ಹೋಗಿ, ಮಡಿವಾಳ ವೀರ – ವೀರಭದ್ರನಿಗೆ ಹಾಗೂ ಶಿವಲಿಂಗಕ್ಕೆ ಪೂಜಾಭಿಷೇಕಗಳನ್ನು ಸಲ್ಲಿಸುತ್ತಾರೆ.

ಸ್ಥಳಪುರಾಣ ಹೇಳುವವರು, ಶ್ರೀ ಮಡಿವಾಳ ಮಾಚಿದೇವರು ಈ ಕ್ಷೇತ್ರದಲ್ಲಿ ಮೂರು ವರ್ಷಕಾಲ ಶಿವಯೋಗ ತಪಸ್ಸಾಮ್ರಾಜ್ಯ ವೈಭವದಲ್ಲಿದ್ದರೆಂದು ಹೇಳುತ್ತಾರೆ. ಅಂದರೆ ಸಿದ್ಧಗಂಗಾಕ್ಷೇತ್ರ, ಮೇದಾರ ಕೇತಯ್ಯ, ಮಡಿವಾಳ ಮಾಚಯ್ಯ, ಸಿದ್ಧರಾಮೇಶ್ವರ ಈ ತ್ರಯ ಶಿವಶರಣರ ತಪೋನುಷ್ಠಾನ ಕ್ಷೇತ್ರವೂ ಆಗಿತ್ತು ಎಂಬುದಕ್ಕೆ ಕ್ಷೇತ್ರಾಚರಣೆ, ಸ್ಥಳಪುರಾಣಗಳು, ಐತಿಹ್ಯಗಳು ಇತಿಹಾಸದ ಕೆಲಮಟ್ಟಿನ ಸ್ಪರ್ಶವೂ ಇಂಬುಗೊಡುವಂತಿವೆ.

ಬಸವಣ್ಣ : ನಮ್ಮ ಹರನ ಲಲಾಟದಲ್ಲಿ ಜನಿಸಿದಾತ ವೀರ; ನಮ್ಮ ಕೂಡಲ ಸಂಗಮನಲ್ಲಿ ಮಡಿವಾಳ ವೀರ

ಎಂದಿದ್ದಾನೆ. ಅದು ಮಡಿವಾಳ ಮಾಚಯ್ಯನಿಗೆ ಅನ್ವಯವಾದ ಶೌರ್ಯಗುಣದ ಸಂಕೇತವಾಗಿದೆ. ಈ ಸಂದರ್ಭಕ್ಕೆ ಪೋಷಕವಾಗಿ ಸಿದ್ಧಗಂಗಾ ಕ್ಷೇತ್ರಕ್ಕೆ ಸನಿಹವಿರುವ ಮೈದಾಳ ಗ್ರಾಮದಲ್ಲಿ 'ಮೈದಾಳ ವೀರಭದ್ರ'ನನ್ನೂ ಗಮನಿಸಬೇಕಾಗುತ್ತದೆ. ಆ ಗ್ರಾಮದಲ್ಲಿ ಬಾರಿ ಕೆರೆಯೂ ಇದೆ. 'ಮಡಿವಾಳ' ಶಬ್ದವು ಜನಪದ ರೂಡಿಯಲ್ಲಿ ರೂಪಾಂತರಗೊಂಡು (ಮಡಿವಾಳ>ಮದಿವಾಳ>ಮದ್ವಾಳ>ಮಯಿದಾಳ>ಮೈದಾಳ!) 'ಮೈದಾಳ' ಎನ್ನಿಸಿರಬಹುದೇ ಅಲ್ಲದೆ ಮಡಿವಾಳ ಮಾಚಯ್ಯ ವೀರಭದ್ರನ ಅವತಾರ ಎಂಬ ಆರೋಪ ಶರಣರಿಂದಲೂ ಕಾಣಬರುವಲ್ಲಿ ಅವನನ್ನು ಸಂಕೇತಿಸುವಂತೆ ಮೈದಾಳ ವೀರಭದ್ರನಿರಬಹುದು. ಈ ಶರಣ ಕ್ಷೇತ್ರದಲ್ಲಿ ಮಡಿವಾಳ ಮಾಚಯ್ಯನ ಸಂಕೇತವಾಗಿ 'ಮೈದಾಳ ವೀರಭದ್ರ'ನು ಮೈತಳೆದು ಪೂಜಾ ಪರಂಪರೆ ನಡೆದುಬಂದಿರಬಹುದೆನಿಸುತ್ತದೆ.

ಸನಿಹದ ಬೆಳಗುಂಬ ಕ್ಷೇತ್ರದಲ್ಲಿ ಮಡಿವಾಳ ಮಾಚಯ್ಯ ಕೆಲವರ್ಷ ತಪೋನುಷ್ಠಾನದಲ್ಲಿದ್ದ ಎಂಬ ಸ್ಥಳೀಯ ಪುರಾಣವೂ ಇದೆ. ಅಂತಾಗಿ ಈ ಕ್ಷೇತ್ರವು ಶರಣರ ಸಂಚಾರಿ ಕ್ಷೇತ್ರ ಅನುಷ್ಠಾನ ಕ್ಷೇತ್ರವಾಗಿತ್ತೆನ್ನಲು ಪೂರಕ ಸಾಕ್ಷ್ಯವಾಗುತ್ತದೆ.

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಹೀಗೆ ಶಿವಶರಣರ ಆರಾಧನೆ, ಶಿವಾರಾಧನೆಯ ಸೂಚಕವಾಗಿಯೇ ಬೆಳೆದು ಬಂದಿರುವುದು, ಆಚರಣೆಗಳಿಂದ, ಐತಿಹ್ಯಗಳಿಂದ ಇತಿಹಾಸದ ಸ್ಪರ್ಶಗಳಿಂದ ವಿಧಿತವಾಗುತ್ತದೆ. ಅಂದರೆ ೧೨ನೆಯ ಶತಮಾನದಲ್ಲಿಯೇ ಶ್ರೀ ಸಿದ್ಧಗಂಗಾಕ್ಷೇತ್ರವು ಶರಣರ ತಪೋಭೂಮಿಯೂ ಆಗಿತ್ತು. ಶಿವಾರಾಧನೆಯ ತಪೋನುಷ್ಠಾನ ಕ್ಷೇತ್ರವೂ ಆಗಿತ್ತು ಎಂದಾಗುತ್ತದೆ. ತದನಂತರ ಗೋಸಲ ಪರಂಪರೆಯಲ್ಲಿ ಈ ಸಿದ್ಧಗಂಗಾ ಕ್ಷೇತ್ರವು ಅರಳಿತು. ತೋಂಟದ ಸಿದ್ಧಲಿಂಗರು, ಕ್ಷೇತ್ರ ಮಹತಿಯನ್ನು ಪ್ರಸರಿಸಿದರು ಎಂಬುದು ಇತಿಹಾಸದ ಅಂಕಣದಲ್ಲಿ ಕಾಣಬರುವ ಸಂಗತಿ.*

* ಸಿದ್ಧಗಂಗೆಯ ಕ್ಷೇತ್ರಕಾರ್ಯಗಳಲ್ಲಿ ನೆರವಾದವರು
ಶ್ರೀ ಎಸ್. ರೇಣುಕಾರಾಧ್ಯ, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ,
ಶ್ರೀ ಕೆ.ಹೆಚ್. ಶಿವರುದ್ರಯ್ಯ, ಶ್ರೀ ಎಂ. ರೇಣುಕಾರಾಧ್ಯ,
ಶ್ರೀ ನಟರಾಜ್, ಶ್ರೀ ಪಟೇಲ್ ಡಿ.ಆರ್. ಶಿವಕುಮಾರ್,
ಶ್ರೀ ಡಿ.ಎಸ್. ನಂದಕುಮಾರ್, ಬೆಳಗುಂಬದ
ಶ್ರೀ ಶಾಂತಮಲ್ಲೇಶಯ್ಯ, ಶ್ರೀ ರಾಜಶೇಖರಯ್ಯ,
ಕು॥ ಹೇಮಂತ್, ಕು॥ ಮಂಜುನಾಥ್ ಮುಂತಾದವರಾಗಿದ್ದಾರೆ.

ಮುಂದುವರೆಯುತ್ತದೆ





## ನುಡಿನಮನ

# ಶ್ರೇಷ್ಠ ಸಂಶೋಧಕ, ಕನ್ನಡದ ಸೇನಾನಿ, ಕನ್ನಡ ಜಂಗಮ ಡಾ. ಎಂ. ಚಿದಾನಂದಮೂರ್ತಿಯವರು

– ಎಚ್.ಎಸ್. ಸಿದ್ಧಗಂಗಪ್ಪ *



ಕನ್ನಡ ನಾಡು ಕಂಡ ಶ್ರೇಷ್ಠ ಸಂಶೋಧಕ, ವಿದ್ವಾಂಸ, ಕನ್ನಡವನ್ನೇ ಉಸಿರಾಡುತ್ತಿದ್ದ ಅಪ್ರತಿಮ ಕನ್ನಡ ಸೇನಾನಿ, ಸಂಶೋಧನೆ, ಸಾಹಿತ್ಯ, ಛಂದಸ್ಸು, ಶಾಸನಶಾಸ್ತ್ರ, ಭಾಷಾ ವಿಜ್ಞಾನ, ಜಾನಪದ ಗ್ರಂಥ ಸಂಪಾದನೆ, ಕರ್ನಾಟಕ ಸಂಸ್ಕೃತಿ ಕ್ಷೇತ್ರಗಳಲ್ಲಿ ಅಪಾರವಾದ ಪಾಂಡಿತ್ಯವನ್ನು ಗಳಿಸಿದ್ದ, ಅಮೂಲ್ಯ ಗ್ರಂಥಗಳನ್ನು ರಚಿಸಿದ್ದ ಕನ್ನಡ ಜಂಗಮ, ಸರಳತೆ, ಸಜ್ಜನಿಕೆ, ಹೃದಯವಂತಿಕೆ, ಮಾನವೀಯ ಆದರ್ಶ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಜೀವನದ ಕೊನೆ ಕ್ಷಣದವರೆಗೂ ಕಾಪಾಡಿಕೊಂಡು ಬಂದಿದ್ದ ಡಾ. ಎಂ. ಚಿದಾನಂದಮೂರ್ತಿಯವರು ಜನವರಿ ೧೧, ೨೦೨೦ ರಂದು ವಿಧಿವಶರಾದುದು ಕನ್ನಡ ನಾಡು, ನುಡಿಗೆ ಭರಿಸಲಾಗದ ಅಪಾರವಾದ ನಷ್ಟ. ಅವರು ಬಿಟ್ಟು ಹೋದ ಸ್ಥಾನವನ್ನು ತುಂಬುವವರು ಯಾರು ಎಂಬುದು ನನ್ನ ಮನಸ್ಸಿನಲ್ಲಿ ಪ್ರಶ್ನೆಯಾಗಿಯೇ ಉಳಿದಿದೆ !

ನಿರಂತರ ಅಧ್ಯಯನ, ಹೊಸತನ್ನು ಕಂಡುಕೊಳ್ಳಲು ಸದಾ ಹುಡುಕಾಟ, ಹೊಸತನ್ನು ಹೇಳಬೇಕೆನ್ನುವ ತವಕ, ಆಧಾರವಿಲ್ಲದೆ ಮಾತನಾಡದ ಡಾ. ಚಿದಾನಂದಮೂರ್ತಿಯವರು ವಿದ್ವತ್ ಗಣಿಯೇ ಆಗಿದ್ದರು. ಅವರದು ಭೀಮ ಪ್ರತಿಭೆ. ಕನ್ನಡ ನಾಡು ನುಡಿಗೆ ಎಲ್ಲಿ ಅನ್ಯಾಯವಾಗುತ್ತದೆಯೋ ಅಲ್ಲಿ ಪ್ರತಿಭಟನೆಗೆ, ಚಳುವಳಿಯ ಮುಂಚೂಣಿಯಲ್ಲಿದ್ದು ಹೋರಾಟಗಾರರಿಗೆ, ಸ್ಫೂರ್ತಿಯನ್ನು, ಹೋರಾಟದ ಕಿಚ್ಚನ್ನು ಹಚ್ಚುತ್ತಿದ್ದರು.

ಶಾಸನಗಳ ಅಧ್ಯಯನಕ್ಕೆ ಒಂದು ಭದ್ರ ಬುನಾದಿಯನ್ನು ಹಾಕಿದರು. ಅಜ್ಞಾತವಾಗಿಯೇ ಉಳಿದಿದ್ದ ನೂರಾರು ಶಾಸನಗಳು ಮಾತನಾಡುವಂತೆ ಮಾಡಿದ ಶ್ರೇಷ್ಠ ಶಾಸನ ತಜ್ಞರಾಗಿ ಕರ್ನಾಟಕವಷ್ಟೇ ಅಲ್ಲ ಇಡೀ ಭಾರತದ ಶಾಸನ ತಜ್ಞರ ಗಮನ ಸೆಳೆದಿದ್ದರು. ಶಾಸನ ಅಧ್ಯಯನಕ್ಕೆ ಮಾರ್ಗದರ್ಶಕರಾಗಿದ್ದರು, ಪ್ರೇರಕ ಶಕ್ತಿಯಾಗಿದ್ದರು. ಸಂಶೋಧನೆಯನ್ನು ಒಂದು ವ್ರತವಾಗಿ ಸ್ವೀಕರಿಸಿ, ಸಂಶೋಧನಾ ಕ್ಷೇತ್ರಕ್ಕೆ ಒಂದು ವ್ಯವಸ್ಥಿತವಾದ ಅಧ್ಯಾಯದ ಪದ್ಧತಿಯನ್ನು, ನೀತಿ ನಿಯಮವನ್ನು ರೂಪಿಸಿದ್ದರು. ಸಂಶೋಧನೆಯಲ್ಲಿ ಅವರಿಗೆ ಅವರೇ ಸಾಟಿಯಾಗಿದ್ದರು.

ಕನ್ನಡ ಅಧ್ಯಾಪಕರಾಗಿ, ಬೆಂಗಳೂರು ವಿಶ್ವವಿದ್ಯಾಲಯ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಚಿದಾನಂದಮೂರ್ತಿಯವರು ವಿದ್ಯಾರ್ಥಿಗಳಿಗೆ ಪ್ರೀತಿಯ ಮೇಷ್ಟ್ರಾಗಿದ್ದರು. ಹಕ್ಕೊತ್ತಾಯ, ಜಂಗಮವಾಣಿ ಮೊದಲಾದ ಶಬ್ದಗಳ ಸೃಷ್ಟಿಕರ್ತಕರಾಗಿದ್ದರು.

ಜನನ : ಚಿದಾನಂದಮೂರ್ತಿಯವರು ಹುಟ್ಟಿದ್ದು ಮೇ ೧೦, ೧೯೩೧ ರಂದು ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಹಿರೇಕೋಗಲೂರುನಲ್ಲಿ ಜನಿಸಿದರು. ಶಿವಮೊಗ್ಗ ಜಿಲ್ಲೆ ಅನೇಕ ಪ್ರತಿಭಾವಂತ ವಿದ್ವಾಂಸರನ್ನು ಕೊಟ್ಟ ಜಿಲ್ಲೆ. ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಡಾ. ಹಾ.ಮಾ. ನಾಯಕ ಮೊದಲಾದವರ ಸಾಲಿಗೆ ಡಾ. ಎಂ. ಚಿದಾನಂದಮೂರ್ತಿಯವರು ಸೇರುತ್ತಾರೆ. ಹಡೆದ ಪುಣ್ಯಜೀವಿಗಳು ತಂದೆ ಕೊಟ್ರಯ್ಯ, ತಾಯಿ ಪಾರ್ವತಮ್ಮ. ತಂದೆ ಹಳ್ಳಿಯ ಮಠದ ಜಂಗಮರಾಗಿದ್ದರು. ತಾಯಿ ಪಾರ್ವತಮ್ಮ ಪುಟ್ಟ ಕಂದನನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುವಾಗ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಲನೇ ಬ್ಲಾಕ್,
ಸ್ಫೂರ್ತಿಧಾಮದ ಎದುರು ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧





ಹಾಡುತ್ತಿದ್ದ ಹಾಡು "ಆಚಾರಕ್ಕರಸಾಗು ನೀತಿಗೆ ಪ್ರಭುವಾಗು, ಮಾತಿನಲಿ ಚೂಡಾಮಣಿಯಾಗು ಕಂದಯ್ಯ, ಜ್ಯೋತಿಯೇ ಆಗು ಜಗಕ್ಕೆಲ್ಲ" ಎಂದು ಇಷ್ಟದೈವವನ್ನು ಭಕ್ತಿಯಿಂದ ಸ್ಮರಿಸುತ್ತಾ ಹಾಡುತ್ತಿದ್ದ ಹಾರೈಕೆಯ ಹಾಡು ಸುಳ್ಳಾಗಲಿಲ್ಲ ! ಮುಂದೆ ಬೆಳೆಯುತ್ತಾ ಜ್ಞಾನದ ಜ್ಯೋತಿಯಾದರು. ಮಾನವೀಯ ಮೌಲ್ಯಗಳ ಸಾಕಾರಮೂರ್ತಿಯಾದರು. ಬಸವಣ್ಣನವರ ಆದರ್ಶಗಳನ್ನು ಮೈಗೂಡಿಸಿಕೊಂಡರು ಅಂತರಂಗ ಹಾಗೂ ಬಹಿರಂಗಗಳೆರಡರಲ್ಲೂ ಏಕತಾನತೆಯನ್ನು ಕಾಪಾಡಿಕೊಂಡು ಬಂದರು. ಬಾಲ್ಯದಲ್ಲಿ ಹಾಕುತ್ತಿದ್ದ ಸ್ವಚ್ಛವಾದ ಉಡುಪಿನಂತೆಯೇ ಅಂತರಂಗದಲ್ಲೂ ಶುಭ್ರತೆಯನ್ನು ಕಾಪಾಡಿಕೊಂಡು ಬಂದ ಡಾ. ಎಂ. ಚಿದಾನಂದಮೂರ್ತಿಯವರು ಎಲ್ಲರನ್ನು ಪ್ರೀತಿ, ವಿಶ್ವಾಸ, ಗೌರವದಿಂದ ಕಾಣುತ್ತಿದ್ದರು.

**ಶಿಕ್ಷಣ :** ಪ್ರಾಥಮಿಕ ಶಿಕ್ಷಣವನ್ನು ಹುಟ್ಟಿದೂರಿನಲ್ಲಿ ಮುಗಿಸಿ, ಮಾಧ್ಯಮಿಕ ಶಿಕ್ಷಣವನ್ನು ಸಂತೆಬೆನ್ನೂರಿನಲ್ಲಿ ಪಡೆದು, ಚನ್ನಗಿರಿಯಲ್ಲಿ ಪಬ್ಲಿಕ್ ಪರೀಕ್ಷೆಯಲ್ಲಿ ಕುಳಿತು ಮೊದಲ ದರ್ಜೆಯಲ್ಲಿ ಉತ್ತೀರ್ಣರಾದರು. ದಾವಣಗೆರೆಯಲ್ಲಿ ಇಂಟರ್‌ಮೀಡಿಯೇಟ್ ಕಾಲೇಜಿಗೆ ಸೇರಿ ರ್‍ಯಾಂಕ್‌ನೊಂದಿಗೆ ಹೆತ್ತವರಿಗೆ, ಹುಟ್ಟಿದೂರಿಗೆ ಗೌರವವನ್ನು ತಂದುಕೊಟ್ಟರು. ಅವರು ಇಂಟರ್‌ಮೀಡಿಯೇಟ್‌ನಲ್ಲಿ ಆರಿಸಿಕೊಂಡ ವಿಷಯ ಗಣಿತ ಮತ್ತು ವಿಜ್ಞಾನ. ಆದರೆ ಆ ವೇಳೆಗೆ ಅವರಿಗೆ ಕನ್ನಡದ ಸೆಳೆತ, ಅಸಕ್ತಿಯಿಂದಾಗಿ ಮೈಸೂರು ಮಹಾರಾಜ ಕಾಲೇಜಿಗೆ ಕನ್ನಡ ಆನರ್ಸ್ ವಿದ್ಯಾರ್ಥಿಯಾಗಿ ಸೇರಿದುದು ಅನೇಕ ಜನರಿಗೆ ಸೋಜಿಗದ ಸಂಗತಿಯಾಗಿತ್ತು.

ಚಿನ್ನದ ಪದಕದೊಂದಿಗೆ ಪ್ರಥಮ ರ್‍ಯಾಂಕ್‌ನೊಂದಿಗೆ ಉತ್ತೀರ್ಣರಾದರು. ಸಾಹಿತ್ಯ ದಿಗ್ಗಜಗಳಾದ ತೀ.ನಂ.ಶ್ರೀ., ಎಲ್. ಬಸವರಾಜು, ಜಿ.ಎಸ್. ಶಿವರುದ್ರಪ್ಪನವರು ಚಿದಾನಂದಮೂರ್ತಿಯವರ ಗುರುಗಳಾಗಿದ್ದರು. ಬಾಲ್ಯದಿಂದಲೂ ಸಾತ್ವಿಕ ಗುಣವನ್ನು ಮೈಗೂಡಿಸಿಕೊಂಡಿದ್ದ ಚಿದಾನಂದಮೂರ್ತಿಯವರಿಗೆ ಕನ್ನಡ ಅಧ್ಯಾಪಕನಾಗಿ ಪಾಠ ಹೇಳಬೇಕು, ಸರಳವಾದ, ಆದರ್ಶಮಯವಾದ ಸಾತ್ವಿಕ ಜೀವನವನ್ನು ನಡೆಸಬೇಕೆಂಬ ಕನಸಿನ ಸಾಕಾರಕ್ಕಾಗಿ ಬಿ.ಎ. ಆನರ್ಸ್‌ಗೆ ಸೇರಿದರು.

**ವೃತ್ತಿಜೀವನ :** ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ವೃತ್ತಿಜೀವನವನ್ನು ಆರಂಭಿಸಿದ ಚಿದಾನಂದಮೂರ್ತಿಯವರು ಎರಡು ವರ್ಷಗಳ ಕಾಲ ಬೆಂಗಳೂರು, ತುಮಕೂರು, ಕೋಲಾರದ ಸರ್ಕಾರಿ ಕಾಲೇಜುಗಳಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮೂರ್ತಿಯವರು ತಮ್ಮೊಳಗಿನ ಜ್ಞಾನದ ಹಸಿವನ್ನು ತಣಿಸಲು ವೃತ್ತಿಗೆ ವಿದಾಯ ಹೇಳಿ ಮೈಸೂರಿನತ್ತ ಮುಖ ಮಾಡಿದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ಪದವಿಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿದ ಪ್ರತಿಭಾವಂತರು. ವಿದ್ವತ್ ಗಣಿಯಾಗಿದ್ದು, ಡಾ. ಕುವೆಂಪು, ಡಿ.ಎಲ್. ನರಸಿಂಹಾಚಾರ್ಯ, ತ.ಸು. ಶಾಮರಾವ್, ಕ.ವೆಂ. ರಾಘವಾಚಾರ್ಯ, ಎಸ್. ಶ್ರೀಕಂಠಶಾಸ್ತ್ರಿಗಳಂತಹ ಗುರುಗಳನ್ನು ಪಡೆದ ನಾನು ನಿಜಕ್ಕೂ ಧನ್ಯ ಎಂದು ಹೇಳುತ್ತಿದ್ದ ವಿನಮ್ರ ಶಿಷ್ಯರಾಗಿದ್ದರು. ಅವರ ಗುರು ಶಿಷ್ಯ ಸಂಬಂಧ ಹಾಲು ಜೇನು ಬೆರೆತಂತಿತ್ತು.

೧೯೫೭ ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಯುವರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿ ಮತ್ತು ವೃತ್ತಿಜೀವನ ಆರಂಭಿಸಿದ ಚಿದಾನಂದಮೂರ್ತಿಯವರು ೧೯೬೦ ರಲ್ಲಿ ಮಾನಸ ಗಂಗೋತ್ರಿಯಲ್ಲಿ ಸ್ನಾತಕೋತ್ತರ ಕನ್ನಡ ವಿಭಾಗದ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಅವರು ಕನ್ನಡ ಸಾಹಿತ್ಯವನ್ನು ಬರಿ ಸಾಹಿತ್ಯವಾಗಿ ಅಧ್ಯಯನ ಮಾಡಲಿಲ್ಲ. ಕನ್ನಡ ನಾಡಿನ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಕಟ್ಟುವ ಒಂದು ಮೂಲದ್ರವ್ಯವಾಗಿ ಪರಿಗಣಿಸಿದರು. ನಂತರ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ೧೯೯೦ ಅಕ್ಟೋಬರ್ ೧೦ ರಂದು ಕನ್ನಡ ಕೆಲಸಕ್ಕಾಗಿ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಳ್ಳಲು ಸ್ವಯಂ ನಿವೃತ್ತಿ ಹೊಂದಿದ ಕನ್ನಡದ ವೀರ ಸೇನಾನಿ.

**'ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ'** ಅವರು ಮಂಡಿಸಿದ ಮಹಾಪ್ರಬಂಧಕ್ಕೆ ೧೯೬೪ರಲ್ಲಿ ಪಿ.ಎಚ್‌ಡಿ ಪದವಿಯನ್ನು ಪಡೆದರು. ಈ ಮಹಾಪ್ರಬಂಧ ಶಾಸನಗಳ ಬಗ್ಗೆ ಸಂಶೋಧನೆ ಮಾಡುವವರಿಗೆ ಮಾರ್ಗದರ್ಶಿಯಾಯಿತು. ಅವರು ಯಾವುದೇ ವಿಷಯವನ್ನು ಕುರಿತು ಬರೆಯಲಿ ತಲಸ್ಪರ್ಶಿ ಅಧ್ಯಯನ ಮಾಡಿ ವಿಚಾರಗಳನ್ನು ದಾಖಲಿಸುತ್ತಿದ್ದರು. ಹಾಗಾಗಿ ಅವರು ಬರೆದ ೪೦೦ಕ್ಕೂ ಹೆಚ್ಚು ಪ್ರಬಂಧಗಳು ಮೌಲಿಕವಾಗಿವೆ, ಆಕರಗಳಾಗಿವೆ.

ಡಾ. ಎಂ. ಚಿದಾನಂದಮೂರ್ತಿಯವರದು ಬಹುಮುಖ ಪ್ರತಿಭೆ. ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ವಿಪುಲವಾದ ಅಧ್ಯಯನ ಮಾಡಿ ಗ್ರಂಥಗಳನ್ನು







ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಡಾ. ಎಂ. ಚಿದಾನಂದಮೂರ್ತಿಯವರಿಗೆ 'ಸಿದ್ಧಗಂಗಾಶ್ರೀ' ಪ್ರಶಸ್ತಿ ಪ್ರದಾನ

ರಚಿಸಿದ್ದಾರೆ. ಕವಿರಾಜಮಾರ್ಗ, ಶೂನ್ಯ ಸಂಪಾದನೆ, ವಚನ ಸಾಹಿತ್ಯ, ಜಾನಪದ, ಭಾಷಾ ವಿಜ್ಞಾನ ಹೀಗೆ ಹಲವು ಪ್ರಕಾರಗಳು ಅವರ ಆಸಕ್ತಿ ಕ್ಷೇತ್ರಗಳಾಗಿದ್ದವು.

**ಸಾಹಿತ್ಯ ಕ್ಷೇತ್ರ :** ಶೂನ್ಯ ಸಂಪಾದನೆಯನ್ನು ಕುರಿತು, ಭಾಷಾ ವಿಜ್ಞಾನದ ಮೂಲ ತತ್ತ್ವಗಳು, ಸಂಶೋಧನ ತರಂಗ, ವಚನ ಸಾಹಿತ್ಯ, ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು, ಗ್ರಾಮೀಣ, ವಾಗರ್ಥ, ಪೂರ್ಣ ಸೂರ್ಯಗ್ರಹಣ, ಛಂದೋತರಂಗ, ಪಗರಣ ಮತ್ತು ಇತರ ಸಂಪ್ರಬಂಧಗಳು, ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಸಂಗೀತ ವಿಚಾರ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಲಿಂಗಾಯತ ಅಧ್ಯಯನಗಳು, ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ, ಕರ್ನಾಟಕ ಸಂಸ್ಕೃತಿ, ವಚನ ಶೋಧ, ಹೊಸತು ಹೊಸತು, ಕನ್ನಡಾಯಣ, ಬಸವಣ್ಣನವರು, ವೀರಶೈವ ಧರ್ಮ ಮತ್ತು ಭಾರತೀಯ ಸಂಸ್ಕೃತಿ, ಬಸವಣ್ಣ (ಆಂಗ್ಲ), ಗೋವು-ಗೋಮಾತೆ, ಗೋಹತ್ಯಾ ನಿಷೇಧ ಕಾನೂನು, 'ಕರ್ನಾಟಕದ ನಾಡಗೀತೆ' ಒಂದು ವಿಶ್ಲೇಷಣೆ, ಶಿವಾಜಿ-ಮಲ್ಲಮ್ಮಾಜಿ ಸಮರೋತ್ಸವ, ಯುಗದ ಉತ್ಸಾಹ, (ಬದುಕು, ವಚನ, ಬಯಲು), ಭಾಷಿಕ ಬೃಹತ್ ಕರ್ನಾಟಕ, ಕರ್ನಾಟಕ-ನೇಪಾಳ-ಸಾಂಸ್ಕೃತಿಕ ಸಂಬಂಧ, ಹಂಪಿ ಉಳಿಸಿ – ಭಾರತ ಉಳಿಸಿ, ಯುಗದ ಉತ್ಸಾಹ ಬಸವಣ್ಣ, ಮತಾಂತರ ನಿಷೇಧ ಕಾನೂನು ಸೇರಿದಂತೆ ೭೫ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಇವುಗಳ ಜೊತೆಗೆ ಶ್ರೀಕಂಠತೀರ್ಥ, ಭೂಷಣ, ಅಧ್ಯಯನ ಗ್ರಂಥಗಳನ್ನು ಸಂಪಾದಿಸಿ ಕೊಟ್ಟಿದ್ದಾರೆ. ಕನ್ನಡ ಸಂಸ್ಕೃತಿ, ಬಸವಣ್ಣನವರ ಕೃತಿಗಳು ಕನ್ನಡದಿಂದ ತಮಿಳು, ಬೆಂಗಾಳಿ, ಮರಾಠಿ ಭಾಷೆಗಳಿಗೆ ಅನುವಾದಗೊಂಡಿವೆ.

**ಚಳುವಳಿಯ ಮುಂಚೂಣಿಯಲ್ಲಿ :** ಸದಾ ಸಂಶೋಧನೆ, ಅಧ್ಯಯನ, ಬೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಡಾ. ಚಿದಾನಂದಮೂರ್ತಿಯವರಿಗೆ ಒಂದು ಅನಿರೀಕ್ಷಿತವಾಗಿ ಮನಸ್ಸನ್ನು ಕ್ಷೋಭೆಗೊಳಿಸಿದ ಒಂದು ಘಟನೆ ಕನ್ನಡದ ಪರ, ಕನ್ನಡಿಗರ ಪರ ಹೋರಾಟ ಮಾಡಲು ಪ್ರೇರಣೆ ನೀಡಿತು. ಆ ಘಟನೆಯಾದರೂ ಏನು! ಒಮ್ಮೆ ತಮ್ಮ ಕುಟುಂಬದೊಂದಿಗೆ ಬೆಂಗಳೂರಿನ ರೆಕ್ಸ್ ಚಿತ್ರಮಂದಿರದಲ್ಲಿ ಇಂಗ್ಲಿಷ್‌ನ 'ಬಸ್' ಎಂಬ ಮಕ್ಕಳ ಸಿನಿಮಾ ನೋಡಲು ಹೋಗಿದ್ದರು. ಟಿಕೆಟ್ ಕೊಡುವಂತೆ ಕೌಂಟರ್‌ನಲ್ಲಿ ಕುಳಿತವನಿಗೆ ಕನ್ನಡದಲ್ಲಿಯೇ ಕೇಳಿದರು.

ಅವನು ಇವರ ಮಾತು ಕೇಳಿ ರೇಗಿದ. ಅವರಿಗೆ ಗೌರವ ಕೊಡದೆ ಹೊರದಬ್ಬಿಸಿದ. ಆದರೆ ಅಲ್ಲಿದ್ದ ಯಾವ ಕನ್ನಡಿಗನೂ ಇವರ ಪರ ವಹಿಸಲಿಲ್ಲ. ಚಿದಾನಂದಮೂರ್ತಿಯವರು ಅವಮಾನದಿಂದ ಕುಗ್ಗಿ ಹೋದರು. ಈ ಘಟನೆ ಅವರಲ್ಲಿ ಹೋರಾಟದ ಕಿಚ್ಚು ಹತ್ತಿಸಿತು. ಅವರು ಸುಮ್ಮನೆ ಕೂಡಲಿಲ್ಲ. ಪತ್ರಿಕೆಗಳ ವಾಚಕರವಾಣಿಗೆ ಪತ್ರ ಬರೆದರು. ಎಂ.ಜಿ. ರಸ್ತೆಯ ಗಾಂಧಿ ಪ್ರತಿಮೆಯ ಮುಂದೆ ಧರಣಿ ಕುಳಿತರು. ಕನ್ನಡಿಗರು ಈ ಬಗ್ಗೆ ಚಿಂತನೆ ಮಾಡಲು ಪ್ರೇರೇಪಿಸಿದರು.

ಗೋಕಾಕ್ ಚಳವಳಿಯಲ್ಲಿ ಚಿದಾನಂದಮೂರ್ತಿಯವರು ಸಕ್ರಿಯವಾಗಿ ಪಾಲುಗೊಂಡರು. ಸಾಹಿತಿಗಳು ಹಾಗೂ ಕಲಾವಿದರ ಬಳಗದ ಪ್ರಧಾನ ಸಂಚಾಲಕರಾಗಿ ಬದ್ಧತೆಯಿಂದ ದುಡಿದರು. ಸಾಹಿತಿಗಳನ್ನು ಒಟ್ಟುಗೂಡಿಸಲು ಅಪಾರವಾಗಿ ಶ್ರಮಿಸಿದರು. ಹಲವಾರು ಕಾರ್ಯಯೋಜನೆಗಳನ್ನು ಹಮ್ಮಿಕೊಂಡು ಅವುಗಳನ್ನು ಅನುಷ್ಠಾನಗೊಳಿಸಲು ಪ್ರಾಮಾಣಿಕವಾಗಿ ದುಡಿದರು. ಶಿಕ್ಷಣದ ಮಾಧ್ಯಮದಲ್ಲಿ ಕನ್ನಡ, ಕನ್ನಡಿಗರು ಎದುರಿಸುತ್ತಿರುವ ಉದ್ಯೋಗ ಸಮಸ್ಯೆ, ಸರೋಜಿನಿ ಮಹಿಷಿ ವರದಿ ಜಾರಿಗೆ ಅಗ್ರಹಿಸಿ ೪೯ ದಿನಗಳ ಕಾಲ ಉಪವಾಸ ಸತ್ಯಾಗ್ರಹ ಮಾಡಿದುದು ಅವರೊಳಗಿನ ಕನ್ನಡ ಪರ ಬದ್ಧತೆಗೆ, ಕಳಕಳಿಗೆ ನಿದರ್ಶನ. ಇದೊಂದು ಅವಿಸ್ಮರಣೀಯ ದಾಖಲೆ. ಅವರು ಯಾವುದೇ ಚಳವಳಿಯಲ್ಲಿ ಭಾಗವಹಿಸಲಿ, ಅದಕ್ಕೊಂದು ಚೈತನ್ಯ, ಸ್ಫೂರ್ತಿ ತುಂಬುತ್ತಿದ್ದರು. ಕನ್ನಡ ಮಾಧ್ಯಮ, ಕನ್ನಡ ಶಾಲೆ, ಕನ್ನಡಿಗರಿಗೆ ಉದ್ಯೋಗ, ಕರ್ನಾಟಕದ ನೆಲ ಜಲಗಳ ಸಂರಕ್ಷಣೆಗೆ ನಿರಂತರವಾಗಿ ಹೋರಾಡಿದರು. ಈ ವಿಚಾರಗಳಲ್ಲಿ ಅವರದ್ದು ರಾಜೀ ರಹಿತ ಬದ್ಧತೆಯಾಗಿತ್ತು, ಕಳಕಳಿಯಾಗಿತ್ತು. ಈ ನಾಡಿನಲ್ಲಿ ಕನ್ನಡಿಗರೇ ಸಾರ್ವಭೌಮರು ಎನ್ನುವುದನ್ನು ಅವರು ಜೀವನದುದ್ದಕ್ಕೂ ಪ್ರತಿಪಾದಿಸಿದರು, ಬೀದಿಗಿಳಿದು ಹೋರಾಟ ನಡೆಸಿದರು. ಕನ್ನಡ ಶಕ್ತಿಕೇಂದ್ರವನ್ನು ಸ್ಥಾಪಿಸಿ ಅದಕ್ಕೆ ಶಕ್ತಿಯನ್ನು ತುಂಬಿದರು. ನೈರುತ್ಯ ರೈಲ್ವೆ, ಕಾವೇರಿ ಹೋರಾಟವೂ ಸೇರಿದಂತೆ ೧೯೮೨ ರಿಂದ ೨೦೨೦ ರವರೆಗೆ ನಡೆದ ಎಲ್ಲಾ ಚಳವಳಿಗಳಲ್ಲಿ ಅವರು ವಹಿಸಿದ ಪಾತ್ರ ಗಮನಾರ್ಹವಾದುದು.

**ಕನ್ನಡ ವಿಶ್ವವಿದ್ಯಾಲಯದ ರೂವಾರಿ :**

ಡಾ. ಎಂ. ಚಿದಾನಂದಮೂರ್ತಿಯವರ ಹಲವು ಹೆಬ್ಬಯಕೆಗಳಲ್ಲಿ ಕನ್ನಡಕ್ಕಾಗಿಯೇ ಒಂದು ವಿಶ್ವವಿದ್ಯಾಲಯವಿರಬೇಕೆಂಬುದಾಗಿತ್ತು. ಅದಕ್ಕಾಗಿಯೇ ಅವರು ಕಾರ್ಯರೂಪಕ್ಕೆ ಬರುವಂತೆ ಮಾಡಲು ಶ್ರೀ ಸಿದ್ಧಗಂಗಾ ಮಠದಿಂದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದ ಪಡೆದು ೧೯೮೫ರಲ್ಲಿ ಹಂಪೆಯವರೆಗೆ ೪೧ ದಿನಗಳ ಕಾಲ ಪಾದಯಾತ್ರೆ ಮಾಡಿ ಕನ್ನಡದ ವಿಶ್ವವಿದ್ಯಾಲಯದ ಸ್ಥಾಪನೆಗೆ ಆಗ್ರಹಪಡಿಸಿದರು. ಅವರು ಯಾವುದೇ ಕೆಲಸವನ್ನು ಪ್ರಾರಂಭಿಸಲಿ ಅದು ಅನುಷ್ಠಾನಗೊಳಿಸುವವರೆಗೂ ನಿರಂತರವಾಗಿ ಹೋರಾಟ ನಡೆಸುವುದನ್ನು ಬಿಡುತ್ತಿರಲಿಲ್ಲ. ಸಾಹಿತಿಗಳು, ಕಲಾವಿದರ ಬಳಗದ ಮೂಲಕ ಆಗಿನ ಮುಖ್ಯಮಂತ್ರಿ, ಸಚಿವ ಸಂಪುಟ, ಶಾಸಕರ ಮೇಲೆ ಒತ್ತಾಯ ತಂದು ಅದರ ಸ್ಥಾಪನೆಗೆ ಕಾರಣರಾಗಿದ್ದುದನ್ನು ಕನ್ನಡಿಗರೂ ಎಂದೂ ಮರೆಯುವುದಿಲ್ಲ. ಅವರು ಕೊಟ್ಟು ಬಿಟ್ಟು ಹೋದ ಸಾಧನೆಗಳು ಒಂದೇ, ಎರಡೇ! ನಾಡಿನಲ್ಲಿ ಕನ್ನಡಕ್ಕೆ ಅಗ್ರಸ್ಥಾನ, ಪ್ರೌಢಶಾಲೆಯಲ್ಲಿ ಕನ್ನಡ ವಿಷಯಕ್ಕೆ ೧೨೫ ಅಂಕಗಳ ನಿಗದಿ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸ್ಥಾಪನೆಗಳಲ್ಲಿ ಅವರ ಹೋರಾಟದ ಶಕ್ತಿ ಇದೆ, ಪರಿಶ್ರಮವಿದೆ.

ಕನ್ನಡ ಭಾಷೆ, ನಾಡು, ಸಂಸ್ಕೃತಿಯ ಬಗ್ಗೆ ಅವರಿಗಿದ್ದ ಬದ್ಧತೆ, ಕಳಕಳಿ, ಶ್ರದ್ಧೆ, ಸಂಕಲ್ಪಕ್ಕೆ ಎಣೆ ಇರಲಿಲ್ಲ. ಕನ್ನಡಿಗರಲ್ಲಿ ಕನ್ನಡ ನಾಡು, ನುಡಿ ಸಂಸ್ಕೃತಿಯ ಬಗ್ಗೆ ಎಚ್ಚರ ಮತ್ತು ಅಭಿಮಾನವನ್ನು ಮೂಡಿಸಲು ೬೦ರ ದಶಕದಲ್ಲಿ ಅವರು ತುಂಗಭದ್ರ ನದಿಯಲ್ಲಿ ಆತ್ಮಾರ್ಪಣೆ ಮಾಡಿಕೊಳ್ಳಲು ಮುಂದಾಗಿದ್ದರು. ಕನ್ನಡದ, ಕನ್ನಡಿಗರ ಸುದೈವ ಬದುಕುಳಿದಿದ್ದರು.

**ವಿದೇಶ ಪ್ರವಾಸ :** ಅಮೇರಿಕಾ, ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಗ್ರೀಸ್, ಜಪಾನ್ ಸೇರಿದಂತೆ ಹಲವಾರು ದೇಶಗಳಲ್ಲಿ ಪ್ರವಾಸ ಮಾಡಿ ಅಲ್ಲಿ ವಿಶ್ವವಿದ್ಯಾಲಯದ ವಿದ್ವಾಂಸರಿಗೆ ತಮ್ಮಲ್ಲಿನ ಅಗಾಧವಾದ ವಿದ್ವತ್ತನ್ನು ಪರಿಚಯ ಮಾಡಿಕೊಟ್ಟಿದ್ದರು. ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿದ್ದುಕೊಂಡು ಭಾಷಾ ವಿಜ್ಞಾನದಲ್ಲಿ ಪೋಸ್ಟ್ ಡಾಕ್ಟರೇಟ್ ಅಧ್ಯಯನ ಮಾಡಿದ್ದರು. ಸ್ಪ್ಯೆನ್ ವಿಶ್ವವಿದ್ಯಾಲಯದಲ್ಲಿ ೪ನೇ ಅಂತರಾಷ್ಟ್ರೀಯ ಐತಿಹಾಸಿಕ ಭಾಷಾ ವಿಜ್ಞಾನ ಸಮ್ಮೇಳನದ ಗೋಷ್ಠಿಯ ಅಧ್ಯಕ್ಷತೆಯ ಗೌರವಕ್ಕೆ ಭಾಜನರಾಗಿದ್ದರು. ಅಲ್ಲದೆ ತಿರುವನಂತಪುರದ ದ್ರಾವಿಡ



ಭಾಷಾ ವಿಜ್ಞಾನ ಸಂಸ್ಥೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಗೌರವಕ್ಕೆ ಪಾತ್ರರಾಗಿದ್ದರು.

**ಪ್ರಶಸ್ತಿ ಗೌರವಗಳು :** ಡಾ. ಚಿದಾನಂದಮೂರ್ತಿಯವರು ಸಂಶೋಧನೆ, ಸಾಹಿತ್ಯ, ಭಾಷಾ ವಿಜ್ಞಾನ, ಇತಿಹಾಸ, ಶಾಸನ, ಜಾನಪದ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಯನ್ನು ಮನಗೊಂಡ ಸರ್ಕಾರ, ಸಂಘ ಸಂಸ್ಥೆಗಳು, ಮಠ ಮಾನ್ಯಗಳು ಪ್ರಶಸ್ತಿ ನೀಡಿ, ಸನ್ಮಾನಿಸಿ ಗೌರವಿಸಿವೆ. ಅವರು ಪಡೆದ ಕೆಲವು ಪ್ರತಿಷ್ಠಿತ ಪ್ರಶಸ್ತಿಗಳನ್ನು ಹೆಸರಿಸುವುದಾದರೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತು ವಜ್ರಮಹೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ, ಸಿದ್ಧಗಂಗಾಶ್ರೀ ಪ್ರಶಸ್ತಿ, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಕನ್ನಡ ಕುಲತಿಲಕ ಪ್ರಶಸ್ತಿ, ಪ್ರೊ. ಮಾಳವಾಡ ಪ್ರಶಸ್ತಿ, ಪ್ರೊ. ಭೂಷನೂರಮಠ ಪ್ರಶಸ್ತಿ, ಶ್ರೀಕೃಷ್ಣದೇವರಾಯ ಪ್ರಶಸ್ತಿ, ಅ.ನ.ಕೃ. ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ಉಡುಪಿ ಶ್ರೀಕೃಷ್ಣ ಪ್ರಶಸ್ತಿ, ಅರವಿಂದ ಜೋಷಿ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಸಿರಿಗನ್ನಡ ರಾಷ್ಟ್ರೀಯ ಸಾಹಿತ್ಯರತ್ನ ಪ್ರಶಸ್ತಿ, ವಿಶ್ವಚೇತನ ಪ್ರಶಸ್ತಿ, ಆಳ್ವಾಸ್ ನುಡಿಸಿರಿ ಪ್ರಶಸ್ತಿ, ಡಾ. ಎಚ್. ನರಸಿಂಹಯ್ಯ ಪ್ರಶಸ್ತಿ, ಕಾಯಕಶ್ರೀ ಪ್ರಶಸ್ತಿ, ಕಾವೇರಿ ಪ್ರಶಸ್ತಿ, ಬಸವಶ್ರೀ ಸಾಹಿತ್ಯ ಪ್ರಶಸ್ತಿ, ಹುಯಿಲುಗೋಳ ನಾರಾಯಣರಾವ್ ಸ್ಮಾರಕ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, Eminent son of Kannada ಪ್ರಶಸ್ತಿ, ಇಂಗ್ಲೆಂಡಿನ ಕೇಂಬ್ರಿಡ್ಜ್ International Biographical Center ಸಂಸ್ಥೆಯ International Man of the Year ೧೯೯೬-೯೭ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳಿಗೆ ಭಾಜನರಾದ ಶ್ರೇಷ್ಠ ವಿದ್ವಾಂಸ ಡಾ. ಎಂ. ಚಿದಾನಂದಮೂರ್ತಿಯವರು. ಆದರೆ ಇಂಥ ಶ್ರೇಷ್ಠ ವಿದ್ವಾಂಸರನ್ನು, ಕನ್ನಡಪರ ಹೋರಾಟಗಾರರನ್ನು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡದೇ ಇದ್ದುದು ಕನ್ನಡ ಸಾಹಿತ್ಯ ಪರಿಷತ್ತಿನ ಇತಿಹಾಸದಲ್ಲಿ ಒಂದು ಕಪ್ಪುಚುಕ್ಕೆ ಇದ್ದಂತೆ.

**ಶ್ರೀ ಸಿದ್ಧಗಂಗಾ ಮಠದೊಂದಿಗೆ ಅವಿನಾಭಾವ ಸಂಬಂಧ :** ಡಾ. ಎಂ. ಚಿದಾನಂದಮೂರ್ತಿಯವರು ನಾಡಿನ ಪುಣ್ಯಕ್ಷೇತ್ರವಾದ ಶ್ರೀ ಸಿದ್ಧಗಂಗಾ ಮಠದ ಬಗ್ಗೆ, ಕರ್ನಾಟಕ ರತ್ನ, ತ್ರಿವಿಧ ದಾಸೋಹಮೂರ್ತಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣವಾದ ಉಪನ್ಯಾಸ ನೀಡಿದ್ದರು, ಏಪ್ರಿಲ್ ೨೪, ೨೦೧೧ ರಂದು ಶ್ರೀಮಠದಲ್ಲಿ ನಡೆದ ಪರಮಪೂಜ್ಯ ಶ್ರೀ ಶ್ರೀಗಳವರ ೧೦೪ನೇ ಜನ್ಮದಿನೋತ್ಸವ ಹಾಗೂ ಗುರುವಂದನ ಸಮಾರಂಭದಲ್ಲಿ ಡಾ. ಎಂ. ಚಿದಾನಂದಮೂರ್ತಿಯವರಿಗೆ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು. ಅವರು ಈ ಸಂದರ್ಭದಲ್ಲಿ ಕೃತಜ್ಞತಾ ನುಡಿಗಳನ್ನಾಡಿ "ತಮ್ಮ ಜೀವನದಲ್ಲಿ ಇಂದು ಸುದಿನ. ಪವಿತ್ರ ಪುಣ್ಯಕ್ಷೇತ್ರವಾದ ಶ್ರೀ ಸಿದ್ಧಗಂಗಾ ಮಠದಲ್ಲಿ ಪರಮಪೂಜ್ಯ ಶ್ರೀಗಳವರಿಂದ ಪ್ರಶಸ್ತಿಯನ್ನು ಸ್ವೀಕರಿಸಿ ಅವರ ಆಶೀರ್ವಾದ ಪಡೆಯುತ್ತಿರುವುದು ನನ್ನ ಪೂರ್ವಾರ್ಜಿತ ಪುಣ್ಯ ಎಂದು ಭಾವಿಸಿದ್ದೇನೆ. ಇದುವರೆಗೆ ತಾನು ಪಡೆದ ಪ್ರಶಸ್ತಿಗಳೆಲ್ಲಕ್ಕಿಂತ ಈ ಪ್ರಶಸ್ತಿ ಕಿರೀಟಪ್ರಾಯವಾದುದು" ಎಂದು ಕೃತಜ್ಞತೆಗಳನ್ನು ಸಲ್ಲಿಸಿದುದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

ಡಾ. ಎಂ. ಚಿದಾನಂದಮೂರ್ತಿ ಯವರು ಲೇಖನವೊಂದರಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ
ಅಂತಿಮ ದರ್ಶನ

"ಕರ್ನಾಟಕದ ಇಂದಿನ ಸುಪ್ರಸಿದ್ಧ ಪೀಠಾಧ್ಯಕ್ಷರಲ್ಲಿ ಅತ್ಯಂತ ಹಿರಿಯರಾದ ಸಿದ್ಧಗಂಗಾ ಕ್ಷೇತ್ರದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರನ್ನು ನಾನು ಹತ್ತಿರದಿಂದ ಬಲ್ಲೆ ಎಂದು ಹೇಳಿಕೊಳ್ಳುವುದರಲ್ಲಿ ನನಗೊಂದು ಸಕಾರಣ ಹೆಮ್ಮೆ ಇದೆ. ಅವರು ಮಾಡುತ್ತಿರುವ ಕಾರ್ಯಗಳು, ಅವರ ಚಿಂತನೆಯ ಹಾದಿ ಇವು ನನ್ನನ್ನು ಚಕಿತಗೊಳಿಸಿದೆ. ಉತ್ಪ್ರೇಕ್ಷೆಯಿಲ್ಲದೆ ಹೇಳುತ್ತೇನೆ ಇಂದಿನ ವೀರಶೈವ ಪೀಠಾಧ್ಯಕ್ಷರಲ್ಲಿ ಅವರು ವಯಸ್ಸಿನಲ್ಲಿ ಮಾತ್ರವಲ್ಲದೆ ಪ್ರಬುದ್ಧತೆಯಲ್ಲೂ ಅವರನ್ನು ಸರಿಗಟ್ಟುವವರು, ಅವರ ಸಮೀಪದಲ್ಲೂ ನಿಲ್ಲಬಲ್ಲವರು ಕಡಿಮೆ ಮಾತ್ರವಲ್ಲ, ಯಾರೂ ನನಗೆ ಕಾಣಿಸುತ್ತಿಲ್ಲ. ವೀರಶೈವರು ಹಿಂದೂಗಳು ಹೌದೇ ಅಲ್ಲವೇ ಎಂಬ ವಿಷಯವೇ ಆಗಲಿ, ವೀರಶೈವರೇ ಬೇರೆ, ಲಿಂಗಾಯಿತರೇ ಬೇರೆ ಎಂಬ ವಿಷಯವೇ ಆಗಲಿ, ಅಂತಹ ಸಮಯಗಳಲ್ಲಿ ಅವರು ದಿಟ್ಟವಾಗಿ ನ್ಯಾಯಪರ ನಿಂತಿದ್ದಾರೆ. "ವೀರಶೈವ ಧರ್ಮ ಹಿಂದೂ ಧರ್ಮದ ಅರ್ಥಾತ್ ಶೈವ ಧರ್ಮದ ಒಂದು ಶಾಖೆ-ದ್ವೈತ, ವಿಶಿಷ್ಟಾದ್ವೈತ ಪಂಥಗಳಿದ್ದಂತೆ" ಎಂದು ಅವರು ಘೋಷಿಸಿದ್ದಾರೆ. ಹಾಗೆಯೇ ವೀರಶೈವ, ಲಿಂಗಾಯತ ಎಂಬವು ವೃಕ್ಷ, ಮರಗಳಂತೆ ವಿಭಿನ್ನ ಭಿನ್ನ ಪದಗಳಾದರು ಅವರು ಸೂಚಿಸುವ ಪರಿಕಲ್ಪನೆ ಒಂದೇ. ಅವರು ಪರಂಪರೆಯಂತೆಯೇ ಆಧುನಿಕ ಜಗತ್ತಿನ ಆಗು ಹೋಗುಗಳನ್ನು ಗ್ರಹಿಸಿ ಸೂಕ್ಷ್ಮವಾಗಿ ಸ್ಪಂದಿಸುತ್ತಾರೆ. ಅವರಲ್ಲಿ ಕೀರ್ತಿ, ಮೋಹ, ಅಸಹನೆ, ಸ್ವಪ್ರತಿಷ್ಠೆ, ಸ್ವಾರ್ಥ ಇವುಗಳಿಗೆ ಅವಕಾಶವೇ ಇಲ್ಲ. ವೀರಶೈವ ಅಥವಾ ಲಿಂಗಾಯತ ಸಮಾಜದಂತೆಯೇ ಭಾರತೀಯ ಸಮಾಜವು, ಮಾನವ ಸಮಾಜವೂ ಅಷ್ಟೆ ಅವರಿಗೆ ಮುಖ್ಯ". ಅವರ ಒಂದೊಂದು ನುಡಿಗಳೂ ಪೂಜ್ಯರ ಶಿವ ವ್ಯಕ್ತಿತ್ವಕ್ಕೆ ಭಾಷ್ಯಬರೆದಂತಿದೆ.

ಡಾ. ಎಂ. ಚಿದಾನಂದಮೂರ್ತಿಯವರು ಭೌತಿಕವಾಗಿ ಇಂದು ನಮ್ಮ ಮುಂದೆ ಇಲ್ಲದೇ ಹೋದರೂ ಅವರು ಬಿಟ್ಟುಹೋದ ಆದರ್ಶ ಮೌಲ್ಯಗಳು, ಮೌಲಿಕ ಗ್ರಂಥಗಳು, ನಾಡು-ನುಡಿ, ಸಂಸ್ಕೃತಿಯ ಅಭಿಮಾನ ನಮಗೆ ಸದಾ ಸ್ಫೂರ್ತಿಯಾಗಿದೆ.

## ವಿಧಿವಶ

ಪ್ರಸಿದ್ಧ ವಿಮರ್ಶಕರಾಗಿದ್ದ

### ಪ್ರೊ. ಎಲ್.ಎಸ್. ಶೇಷಗಿರಿರಾವ್

ಹಿರಿಯ ಸಾಹಿತಿ, ಅನುವಾದಕ, ವಿಮರ್ಶಕ, ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರು ಡಿಸೆಂಬರ್ ೨೦ ರಂದು ವಿಧಿವಶರಾದರು. ಅವರಿಗೆ ೯೪ ವರ್ಷವಾಗಿತ್ತು. ಅವರ ನಿಧನಕ್ಕೆ ಸಿದ್ಧಗಂಗಾ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತದೆ.

ಕನ್ನಡ ಮತ್ತು ಇಂಗ್ಲೀಷ್ ಸಾಹಿತ್ಯ ಕ್ಷೇತ್ರದಲ್ಲಿ ಪ್ರಖ್ಯಾತ ವಿಮರ್ಶಕರಾಗಿದ್ದ ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರು ಬೆಂಗಳೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಇಂಗ್ಲೀಷ್ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿ ನಿವೃತ್ತರಾಗಿದ್ದರು. ಸಣ್ಣ ಕಥೆಗಳು, ನಾಟಕ, ವಿಚಾರ ಸಾಹಿತ್ಯ, ಜೀವನ ಚರಿತ್ರೆ, ಮಕ್ಕಳ ಸಾಹಿತ್ಯ, ಸಾಹಿತ್ಯ ಚರಿತ್ರೆ ಹಾಗೂ ಸಾಹಿತ್ಯ ವಿಮರ್ಶೆಗಳಿಗೆ ಸಂಬಂಧಿಸಿದಂತೆ ಕನ್ನಡ ಮತ್ತು ಇಂಗ್ಲೀಷ್‌ನಲ್ಲಿ ೨೫ಕ್ಕೂ ಹೆಚ್ಚು ಮೌಲಿಕ ಕೃತಿಗಳು ಪ್ರಕಟವಾಗಿವೆ. ಕನ್ನಡ ಭಾಷೆಯ ಉಳಿವು ಹಾಗೂ ಅಭಿವೃದ್ಧಿಗಾಗಿ ಸದಾ ಕ್ರಿಯಾಶೀಲರಾಗಿದ್ದರು. ಗೋಕಾಕ್ ಚಳವಳಿಯಲ್ಲಿ ಭಾಗವಹಿಸಿದ್ದರು.

ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ, ದೇವರಾಜ ಬಹದ್ದೂರ್ ಸಾಹಿತ್ಯ ಬಹುಮಾನ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಪ್ರಶಸ್ತಿಯು ಸೇರಿದಂತೆ ಹಲವಾರು ಪ್ರಶಸ್ತಿಗಳು ಇವರ ಪಾಂಡಿತ್ಯಕ್ಕೆ ದೊರೆತ ಮನ್ನಣೆಗಳಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ, ಜ್ಞಾನಗಂಗೋತ್ರಿ ವಿಶ್ವಕೋಶದ ಸಂಪಾದಕರಾಗಿ, ಮುಖ್ಯಮಂತ್ರಿ ಆರ್. ಗುಂಡೂರಾವ್ ರವರ ಪತ್ರಿಕಾ ಕಾರ್ಯದರ್ಶಿಯಾಗಿ, ಕನ್ನಡ ಪುಸ್ತಕ ಪ್ರಾಧಿಕಾರದ ಮೊದಲ ಅಧ್ಯಕ್ಷರಾಗಿ, ೨೦೦೮ ರಲ್ಲಿ ಉಡುಪಿಯಲ್ಲಿ ನಡೆದ ೭೪ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಗೌರವಕ್ಕೆ ಭಾಜನರಾಗಿದ್ದರು.

ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಅಗಲಿಕೆಯ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.



ಕೃತಿ ಪರಿಚಯ

# ಪುರುಷಸೂಕ್ತಕ್ಕೊಂದು ನಿರಂಜನಜಂಗಮಭಾಷ್ಯ

(ಡಿಸೆಂಬರ್ ಸಂಚಿಕೆಯಿಂದ....)

- ಕೋ.ರಂ. ಬಸವರಾಜು *

ಧಾತಾ ಪುರಸ್ತಾದ್ಯಮುದಾಜಹಾರ ಶಕ್ರಃ ಪ್ರವಿದ್ವಾನ್ ಪ್ರದಿಶಶ್ಚ ತಸ್ರಃ ।
ತಮೇವ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ ॥ ೧೭ ॥

ಟೀ॥ ಧಾತಾ - ಬ್ರಹ್ಮನು, ಪುರಸ್ತಾತ್-ಪ್ರಥಮದಲ್ಲಿ, ಯಂ-ಯಾವನನ್ನು, ಉದಾಜಹಾರ-ಕರ್ತಾರನೆಂದು ನಿರೂಪಿಸಿದಂ, ಉತ್ ಅಜ್ ಎಂಬುಪಸರ್ಗಗಳೇ ಪೂರ್ವದಲ್ಲುಳ್ಳ ಹೃ ಞ್ ಹರಣೇ ಎಂಬಧಾತುವಿನ ಲಿಟ್ಪರಸ್ಮೈಪದ ಪ್ರಥಮ ಪುರುಷೈಕವಚನಂ. ಶಕ್ರಃ-ಇಂದ್ರನು, ಚತಸ್ರಃ-ನಾಲ್ಕಾದಂತಾ, ಪ್ರದಿಶಸ್ತಸ್ಯಃ-ದಿಕ್ಕುಗಳನ್ನಾಗಿ ಪ್ರವಿದ್ವಾನ್-ತಿಳಿದಂ, ತಂ-ಆ ಪುರುಷನಂ, ಏವಂ- ಈ ಪ್ರಕಾರವಾಗಿ, ವಿದ್ವಾನ್- ತಿಳಿದವನು, ಅಮೃತಃ-ಮುಕ್ತನು, ಇಹ-ಇಲ್ಲಿ. ಭವತಿ-ಆದಪಂ, ಅಯನಾಯ-ಜ್ಞಾನಕ್ಕೆ, ಅನ್ಯಃ-ಮತ್ತೊಂದು, ಪಂಥಾಃ-ಮಾರ್ಗವು, ನ ವಿದ್ಯತೇ-ಇಲ್ಲ, ವಿದ ಜ್ಞಾನೇ(ತಿಳಿವಿನೊಳ್) ಎಂಬ ಧಾತುವಿನ ಮೇಲೆ ಕರ್ತರಿಲಡಾತ್ಮನೇಪದದ ಪ್ರಥಮವು ರುಷೈಕವಚನಂ ॥ ೧೭ ॥

ಯಜ್ಞೇನ ಯಜ್ಞಮಯಜಂತ ದೇವಾಃ ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।
ತೇಹ ನಾಕಂ ಮಹಿಮಾನಸ್ಸಚಂತೇ ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ ॥ ೧೮ ॥

ಟೀ॥ ದೇವಾಃ- ಬ್ರಹ್ಮ ವಿಷ್ಣು ರುದ್ರ ಮಹೇಶ್ವರ ಸದಾಶಿವ ವಿರಾಟ್ಪುರುಷರೆಂಬ ಸ್ಥೂಲಷಟ್ಸ್ಥಲವಾಚ್ಯರು, ಯಜ್ಞೇನ-ಅಂಗ ಲಿಂಗ ಮುಖ ಹಸ್ತ ಶಕ್ತಿ ಭಕ್ತಿ ತದರ್ಪಣಾನಂದ ಸಮಂತ್ರಕಪೂಜಾದ್ರವ್ಯದಿಂ, ಯಜ್ಞಂ-ಮಹಾಲಿಂಗ ನಾದ ಬಿಂದು ಕಲಾತ್ರಯ ಚಿದಂಬರಶೂನ್ಯ ಲಿಂಗಾನಾದಿ ಭಕ್ತಪೂಜಾರ್ಹ ನಿರಂಜನಜಂಗಮಂ, ಅಯಜಂತ-ಉದಯ ಮಧ್ಯಾಹ್ನ ಸಾಯಂಕಾಲಗಳಲ್ಲಿ ಪೂಜಿಸಿದರು, ತಾನಿ- ಆ ಪ್ರಸಿದ್ಧಂಗಳಾದ, ಧರ್ಮಾಣಿ-ಬ್ರಹ್ಮ ವಿಷ್ಣು ರುದ್ರಮಹೇಶ್ವರ ಸದಾಶಿವ ವಿರಾಟ್ಪುರುಷರೆಂಬ ಸ್ಥೂಲಷಟ್ಸ್ಥಲಂಗಳಂ ಕರ್ತೃಸಾದಾಖ್ಯ ಕರ್ಮಸಾದಾಖ್ಯ, ಮೂರ್ತಿಸಾದಾಖ್ಯ ಅಮೂರ್ತಿಸಾದಾಖ್ಯ ಶಿವಸಾದಾಖ್ಯ ಪರಸಾದಾಖ್ಯವೆಂಬ ಸೂಕ್ಷ್ಮಷಟ್ಸ್ಥಲಂಗಳುಂ ಸರ್ವಜ್ಞತ್ವಂ ತೃಪ್ತತ್ವಂ ಸ್ವತಂತ್ರತ್ವಂ ಅನಾದಿಬೋಧತ್ವಂ ಅನಂತಶಕ್ತಿತ್ವಂ ಅನಂತವೀರ್ಯತ್ವಮೆಂಬ ಕಾರಣಷಟ್ಸ್ಥಲಂಗಳುಂ, ಪ್ರಥಮಾನಿ ಸಂತಿ-ಪ್ರಧಾನಂಗಳಾಗಿ, ಸನ್-ಭುಕ್ತಿ ಮುಕ್ತಿಕಾರಣಂಗಳಾದವು. ಯತ್ರ-ಆವುದಾದೊಂದು ನಿರಂಜನಜಂಗಮಪ್ರಾಪ್ತಷಟ್ಸ್ಥಲತ್ರಯದಲ್ಲಿ, ಪೂರ್ವೇ-ಮೊದಲಿಗ ರಾದಂಥ, ದೇವಾಃ-ಬ್ರಹ್ಮ ವಿಷ್ಣು ರುದ್ರ ಮಹೇಶ್ವರ ಸದಾಶಿವ ವಿರಾಟ್ಪುರುಷರು, ಸಂತಿ-ಷಟ್ಸ್ಥಲಮಾರ್ಗಮಂ ಬೋಧಿಸಿರುವರೋ, ತತ್ರ- ಆ ನಿರಂಜನಜಂಗಮಲಿಂಗ ಪ್ರಾಪ್ತಿಷಟ್ಸ್ಥಲತ್ರಯದಲ್ಲಿ, ಯೇ - ಆರು ಸಾಧ್ಯಾಃ - ಭುಕ್ತಿ ಮುಕ್ತಿ ಮಾರ್ಗಮಂ ಸಾಧಿಸುವಲ್ಲಿ ಯೋಗ್ಯರೋ, ತೇ-ಆ, ಮಹಿಮಾನಃ-ಮಹಾತ್ಮರು, ನಾಕಂ-ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಕೈವಲ್ಯವೆಂಬೈದುಪ್ರಕಾರಮಾದ ಸುಖಮಂ, ಸಚಂತೇ-ಪಡೆದವರು, ಷಚ ಗತೌ (ನಡೆಯೊಳ್) ಎಂಬ ಧಾತುವಿನ ಮೇಲೆ ಕರ್ತೃವಿನಲಡಾತ್ಮನೇಪದದ ಪ್ರಥಮ ಪುರುಷದ ಬಹುವಚನಂ ॥ ೧೮ ॥

ಮೂ॥ ಅದ್ಭ್ಯಸಂಭೂತಃ ಪೃಥಿವ್ಯೈ ರಸಾಚ್ಚ । ವಿಶ್ವಕರ್ಮಣಸ್ಸಮವರ್ತತಾಧಿ ।
ತಸ್ಯ ತ್ವಷ್ಟಾ ವಿದಧದ್ರೂಪಮೇತಿ ತತ್ಪುರುಷಸ್ಯ ವಿಶ್ವಮಾಜಾನಮಗ್ರೇ ॥ ೧೯ ॥

ಟೀ॥ ಸಂಭೂತಃ -ನಿರಂಜನಜಂಗಮ ಸಹಸ್ರಾಂಶೈಕಾಂಶ ವಿರಾಟ್ಪುರುಷಂ, ಪೃಥಿವ್ಯೈ-ಭೂಮಿಗೋಸ್ಕರ, ಅದ್ಭ್ಯಃ-ಉದಕಂ ಗಳತ್ತಣಿಂ, ರಸಾತ್-ಭೂಮಿಜಲಂಗಳ್ಗೆ ಪ್ರಧಾನವಾಗುಳ್ಳ ವಹ್ನಿ ವಾಯು ನಭಂಗಳತ್ತಣಿಂ, ಚ ಶಬ್ದದಿಂದಾತ್ಮ ನತ್ತಣಿಂದೆಯುಂ, ವಿಶ್ವಕರ್ಮಣಃ - ಪಂಚಕೃತ್ಯಂಗಳತ್ತಣಿಂದೆಯುಂ, ಅಧಿ-ಮಿಗಿಲಾಗಿ, ಸಮವರ್ತತ-ಚನ್ನಾಗಿ ವರ್ತಿಸಿದಂ, ತಸ್ಯ-ಆ ಪ್ರಪಂಚರಚನಾಕರ್ತನಾದ, ಪುರುಷಸ್ಯ-ಪರಿಪೂರ್ಣನಾದ ನಿರಂಜನನ, ತ್ವಷ್ಟಾ-ವಿಶ್ವವ್ಯಾಪಾರವುಳ್ಳ

* ನಿವೃತ್ತ ಪ್ರಾಧ್ಯಾಪಕರು, ಶ್ರೀ ಸಿದ್ಧಗಂಗಾ ಸಂಸ್ಕೃತ ಮಹಾವಿದ್ಯಾಲಯ, ಸಿದ್ಧಗಂಗಾ ಮಠ, ತುಮಕೂರು



ಸದಾಶಿವನು, ಅಗ್ರೇ- ಸೃಷ್ಟಿಯತ್ತಣಿಂ ಮೊದಲೇ, ರೂಪಂ-ಅನೇಕಸ್ವರೂಪವಂ, ವಿದಧತ್-ಮಿಗೆ ಧರಿಸುತ್ತೆ, ತತ್ ಆ ನಿರಂಜನಸಂಬಂಧಿಯಾದ, ಅಜಾನಂ-ಕಟ್ಟಳೆಯನ್ನು, ಏತಿ-ಎಯ್ದಿದಪಂ, ಇಣ್ ಗತೌ(ನಡೆಯೊಳ್) ಎಂಬಧಾತುವಿನ ಕರ್ತೃವಿನಲಟ್ಪರಸ್ಮೈಪದದ ಪ್ರಥಮಪುರುಷೈಕವಚನಂ. ॥ ೧೯ ॥

**ಮೂ॥ ವೇದಾಹಮೇತಂ ಪುರುಷಂ ಮಹಾಂತಂ । ಆದಿತ್ಯವರ್ಣಂ ತಮಸಃ ಪರಸ್ತಾತ್ ।**
**ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ವಿದ್ಯತೇಯನಾಯ ॥ ೨೦ ॥**

ಟೀ॥ ಪರಸ್ತಾತ್-ಅತ್ಯಂತಘನವಾದ, ತಮಸಃ-ಮಾಯಾಂಧಕಾರಕ್ಕೆ, ಆದಿತ್ಯವರ್ಣಂ-ಸೂರ್ಯಪ್ರಕಾಶವುಳ್ಳ, ಏತಂ ಪುರುಷಂ- ಈ ನಿರಂಜನ ಜಂಗಮವನ್ನು, ಮಹಾಂತಂ ಸಂತಂ-ಮಹಾಂತನನ್ನಾಗಿ, ಅಹಂ-ಷಟ್ಸ್ಥಲಬ್ರಾಹ್ಮಣನಾದ ನಾನು, ವೇದ-ತಿಳಿದೆನು, ತಂ-ಆ ನಿರಂಜನನನ್ನು, ಏವಂ-ಇಂತು, ವಿದ್ವಾನ್-ತಿಳಿದಾತಂ, ಇಹ-ಈ ಶರೀರದಲ್ಲಿಯೇ ಅಮೃತಃ-ಮೋಕ್ಷಗಾಮಿಯು, ಭವತಿ-ಆಗುವನು, ಅಯನಾಯ-ಈ ನಿರಂಜನನಪ್ರಾಪ್ತಿಗೆ, ಅನ್ಯಃ-ಮತ್ತೊಂದು, ಪಂಥಾಃ-ಮಾರ್ಗವು, ನ ವಿದ್ಯತೇ-ಇರುವುದಿಲ್ಲ. ॥ ೨೦ ॥

**ಮೂ॥ ಪ್ರಜಾಪತಿಶ್ಚರತಿ ಗರ್ಭೇ ಅಂತಃ ಅಜಾಯಮಾನೋ ಬಹುಧಾ ವಿಜಾಯತೇ ।**
**ತಸ್ಯ ಧೀರಾಃ ಪರಿಜಾನಂತಿ ಯೋನಿಂ ಮರೀಚೀನಾಂ ಪದಮಿಚ್ಛಂತಿ ವೇಧಸಃ ॥ ೨೧ ॥**

ಟೀ॥ ಅಜಾಯಮಾನಃ - ಸೃಷ್ಟಿ ಸ್ಥಿತಿ ಲಯ ತಿರೋಧಾನಾನುಗ್ರಹ ವಿಭುತ್ವಗಳಿಲ್ಲದ ನಿರಂಜನಜಂಗಮವು, ಗರ್ಭೇಅಂತಃ-ಬ್ರಹ್ಮಾಂಡದೊಳಗೆಯುಂ ಪಿಂಡಾಂಡದೊಳಗೆಯುಂ, ಪ್ರಜಾತಿಸ್ಸನ್ ಬ್ರಹ್ಮನಾಗಿ ವಿಷ್ಣುವಾಗಿ ರುದ್ರನಾಗಿ ಮಹೇಶ್ವರನಾಗಿ ಸದಾಶಿವನಾಗಿ ವಿರಾಟ್ಪುರುಷನಾಗಿ, ಚರತಿ-ಸಂಚರಿಸುವನು, ಬಹುಧಾ-ಹಿರಣ್ಯ ಗರ್ಭಾದಿಸ್ತಂಬರೂಪದಿಂ ವಿಜಾಯತೇ-ಜನಿಸಿದಪಂ, ತಸ್ಯ- ಆ ನಿರಂಜನನ, ಯೋನಿಂ-ಮಾಯಾಶಕ್ತಿಯನ್ನು, ಧೀರಾಃ-ಷಟ್ಸ್ಥಲಜ್ಞಾನಿಗಳಾದ, ವೇಧಸಃ-ಬ್ರಾಹ್ಮಣರು, ಪರಿ ಜಾನಂತಿ-ತಿಳಿದವರು, ಪರಿ ಎಂಬುಪಸರ್ಗವೇ ಮೊದಲಲ್ಲುಳ್ಳ ಜ್ಞಾನ ಅವಬೋಧನೇ (ಅರಿವಿನೋಳ್) ಎಂಬ ಧಾತುವಿನ ಮೇಲೆ ಕರ್ತೃವಿನ ಲಟ್ಪರಸ್ಮೈಪದದ ಪ್ರಥಮಪುರುಷೈಕವಚನಂ. ಮರೀಚೀನಾಂ-ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಕೈವಲ್ಯಂಗಳ, ಪದಂ - ಸ್ಥಾನವಾದ ಕೈಲಾಸವನ್ನು, ಇಚ್ಛಂತಿ-ಬಯಸುವವರು, ಇಷು ಇಚ್ಛಾಯಂ ಲಟ್ಪರಸ್ಮೈಪದದ ಪ್ರಥಮಪುರುಷಬಹುವಚನಂ ॥ ೨೧ ॥

**ಮೂ॥ ಯೋ ದೇವೇಭ್ಯ ಆತಪತಿ ಯೋ ದೇವಾನಾಂ ಪುರೋಹಿತಃ ।**
**ಪೂರ್ವೋಯೋ ದೇವೇಭ್ಯೋ ಜಾತಃ ನಮೋರುಚಾಯ ಬ್ರಾಹ್ಮಯೇ ॥ ೨೨ ॥**

ಟೀ॥ ಯಃ- ಆವ ದೇವನು, ದೇವೇಭ್ಯಃ - ಬ್ರಹ್ಮಾದಿಗಳತ್ತಣಿಂ, ಆತಪತಿ-ಪ್ರಕಾಶಿಸಿದಪಂ, ತಪ ಸಂತಾಪೇ ಲಟ್ಪರಸ್ಮೈಪದ ಪ್ರಥಮಪುರುಷೈಕವಚನಂ, ಯಃ-ಯಾವನು, ದೇವಾನಾಂ-ಬ್ರಹ್ಮಾದಿಗಳ, ಪುರಃ- ಪದವಿಗಳಂ, ಹಿತಃ-ಕೊಟ್ಟನು, ಯಃ-ಆವಂ, ದೇವೇಭ್ಯಃ-ಬ್ರಹ್ಮಾದಿಗಳತ್ತಣಿಂ, ಪೂರ್ವಸ್ಸನ್-ಮೊದಲಿಗನಾಗಿ, ಜಾತಃ-ಕಾಣಿಸಿಕೊಂಡಂ, ತಸ್ಮೈ-ಆ, ರುಚಾಯ- ಲೀಲೆಯಾದೊಡುಮಾಪತಿಯಾದ ಲೀಲೆತಪ್ಪಿದೊಡೆ ಸ್ವಯಂಭುವಾದ, ಬ್ರಾಹ್ಮಯೇ-ನಿರಂಜಮಜಂಗಮಕ್ಕೋಸ್ಕರ, ನಮಃ- ನಮಸ್ಕಾರವು, ಬೃಹಬೃಹಿವೃದ್ಧೌ (ಹಿರಿಯತನದಲ್ಲಿ) ಋತ್ವಕ್ಕೆರತ್ವಂ, ಸಂಪ್ರಸಾರಣಂ, ಮಮನಮೀನ್‌ಮಣಿ ಎಂಬ ಪ್ರತ್ಯಯಂಗಳಕ್ಕುಂ, ಬ್ರಹ್ಮ ಬ್ರಹ್ಮನ್ ವೃದ್ಧಿರಾದೌಸಣೇ, ಎಂಬ ಸೂತ್ರದಿಂ ಪೂರ್ವವೃದ್ಧಿಯಾಗಿ ಬ್ರಾಹ್ಮಯೇ ಎಂದಾಯ್ತೆಂದು ಕೌಶಿಕೃತ್ಸನದಶಪಾದಿಯಣಾದಿಯಲ್ಲಿ ಪೇಳಲ್ಪುಡುಗುಂ ॥ ೨೨ ॥

**ಮೂ॥ ಋಚಂ ಬ್ರಾಹ್ಮಂ ಜನಯಂತಃ ದೇವಾ ಅಗ್ರೇ ತದಬ್ರುವನ್ ।**
**ಯಸ್ತ್ವೈವಂ ಬ್ರಾಹ್ಮಣೋವಿದ್ವಾನ್ ತಸ್ಯ ದೇವಾ ಆಸನ್ ವಶೇ ॥ ೨೩ ॥**

ಟೀ॥ ಜನಯಂತಃ - ಭೂ ಒಲಾಗ್ನಿ ಮರುದ್ವ್ಯೋಮಾತ್ಮರಂ ಪುಟ್ಟಿಸುತ್ತಿರ, ದೇವಾಃ-ಬ್ರಹ್ಮ ವಿಷ್ಣು ರುದ್ರ ಮಹೇಶ್ವರ ಸದಾಶಿವನ್ರು, ಅಗ್ರೇ - ಪ್ರಥಮದಲ್ಲಿ, ತತ್-ಆ ನಿರಂಜನ ಜಂಗಮವನ್ನು, ರುಚಂಸತ್-ಲೀಕೆಯಾದೊಡು ಮಾಪತಿಯನ್ನಾಗಿ, ಬ್ರಾಹ್ಮಂ-ಲೀಲೆ ತಪ್ಪಿದೊಡೆ ಸ್ವಯಂಭುವನ್ನಾಗಿ, ಅಬ್ರುವನ್-ಪೇಳ್ದರು, ಯಃ-ಯಾವ ಬ್ರಾಹ್ಮಣಃ - ಪಡುವಣದಿಕ್ಕಿನ ಕಲಶದ ಸದ್ಯೋಜಾತಮುಖದ ಭೂತಿಯ ಹಕ್ಕಳಘಂಟೆಯ ಕಿವಿಯಂತೆ ನೆಲಕೆಬೀಳ್ದು ಹುಟ್ಟಿದ ಘಂಟಾಕರ್ಣಗೋತ್ರದ ಏಕೋರಾಮ ದೇವರಬಗೆಯ ವಿರಕ್ತನಾದೊಡಂ, ಬಡಗಣ ಕಲಶದ ವಾಮದೇವಮುಖದ







ಭಸಿತದಹಕ್ಕಳೆಯಾನೆಕಿವಿಯಂತೆ ಬೀಳ್ದು ಪುಟ್ಟಿದ ಗಜಕರ್ಣನಗೋತ್ರದ ಶಿವಲೆಂಕಮಂಚಣ್ಣ ಪಂಡಿತಾರಾಧ್ಯನ ಬಗೆಯಾರಾಧ್ಯನಾದೊಡಂ, ತೆಂಕಣದಿಕ್ಕಿನ ಕಲಶದ ಅಘೋರಮುಖದ ಭಸ್ಮದಹಕ್ಕಳೆದಾರುವಿನಂತೆ ನೆಲಕೆಬೀಳ್ದು ಹುಟ್ಟಿದ ದಾರುಕಗೋತ್ರದ ಮರುಳಸಿದ್ಧನಬಗೆಯ ಅತಿಥಿಯಾದೊಡಂ, ಮೂಡಣದಿಕ್ಕಿನ ಕಲಶದ ತತ್ಪುರುಷಮುಖದ ಕ್ಷಾರದ ಹಕ್ಕಳೆನೆಲಕೆಬೀಳ್ದು ಹುಟ್ಟಿದ ರೇಣುಕಗೋತ್ರದ ರೇವಣಸಿದ್ಧನಬಗೆಯ ಘನಲಿಂಗಿಯಾದೊಡಂ ಷಟ್ಸ್ಥಲಜ್ಞಾನಿಯಾಗಿ, ಏವಂ-ಈ ಪೂರ್ವೋಕ್ತಪ್ರಕಾರವಾಗಿ, ವಿದ್ವಾನ್-ತಿಳಿದವನೋ, ತಸ್ಯ-ಅವನ, ವಶೇ-ಅಧೀನವಲ್ಲ, ದೇವಾಃ-ಬ್ರಹ್ಮಾದಿಗಳು, ಆಸನ್-ಇದ್ದರು. ॥ ೨೩ ॥

**ಮೂ॥ ಹ್ರೀಶ್ಚತೇಲಕ್ಷ್ಮೀಶ್ಚವತ್ನ್ಯೌ ಅಹೋರಾತ್ರೇ ಪಾರ್ಶ್ವೇ ನಕ್ಷತ್ರಾಣಿರೂಪಂ**
**ಅಶ್ವಿನೌವ್ಯಾತ್ತಂ ಇಷ್ಟಂಮನಿಷಾಣ ಅಮುಂಮನಿಷಾಣ ಸರ್ವಂಮನಿಷಾಣ ॥ ೨೪ ॥**

ಟೀ॥ ಹ್ರೀಶ್ಚ - ಲಜ್ಜಾಸ್ವರೂಪಿಣಿಯಾದ ಮಾಯಾಶಕ್ತಿಯುಂ, ಲಕ್ಷ್ಮೀಶ್ಚ-ಜ್ಞಾನಸ್ವರೂಪಿಯಾದ ಚಿಚ್ಛಕ್ತಿಯುಂ, ತೇ-ಅವರೀರ್ವರೂ, ತೇ-ಎಲೆ ನಿರಂಜನಜಂಗಮನೇ ನಿನ್ನ, ಪತ್ನ್ಯೌ-ಸತಿಯರು, ಅಹೋರಾತ್ರೇ-ಪಗಲಿರುಳ್ಗಳು, ಪಾರ್ಶ್ವೇ-ಅಳ್ಳೆಗಳು, ನಕ್ಷತ್ರಾಣಿ - ಜ್ಯೋತಿರ್ಮಂಡಲಂಗಳು, ರೂಪಂ -ಪುಷ್ಪಂಗಳು, ಅಶ್ವಿನೌ- ದಿ ವೈದ್ಯರು, ವ್ಯಾತ್ತಂ-ಬಾಯ್ದೆರೆ, ಎಲೆ ನಿರಂಜನಜಂಗಮನೆ । ನೀನೇ ಇಷ್ಟಂ - ಇಷ್ಟಲಿಂಗಸ್ವರೂಪಮಂ, ಮನಿಷಾಣ - ಬೋಧಿಸು, ಅಮುಂ-ಇದನೆ ಪ್ರಾಣಲಿಂಗವನ್ನಾಗಿ, ಮನಿಷಾಣ-ಬೋಧಿಸು, ಸರ್ವಂ-ಸಮಸ್ತವಾದ ಭಾವಲಿಂಗವನ್ನಾಗಿ, ಮನಿಷಾಣ-ತಿಳಿಯಿಸು, ಮನು ಆವ ಬೋಧನೆ (ಅರಿವಿನೋಳ್) ಎಂಬ ಧಾತುವಿನ ಮೇಲೆ ಕರ್ತೃವಿನ ಪರಸ್ಮೈ ಪದದ ಲೋಟಿನ ಪ್ರಥಮಪುರುಷೈಕವಚನಂ ॥ ೨೪ ॥

**ಮೂ ॥ ತಚ್ಛಂಯೋರವೃಣೀಮಹೇ ಗಾತುಂಯಜ್ಞಾಯ ಗಾತುಂಯಜ್ಞಪತಯೇ ।**
**ದೈವೀಸ್ಸ್ವಸ್ತೀರಸ್ತು ನಃ ಸ್ವಸ್ತಿರ್ಮಾನುಷೇಭ್ಯಃ ಊರ್ಧ್ವಂ ಜಿಗಾತು ಭೇಷಜಂ**
**ಶಂನೋ ಅಸ್ತು ದ್ವಿಪದೇ ಶಂ ಚತುಷ್ಪದೇ ॥ ೨೫ ॥**

ಟೀ॥ ತಚ್ಛಂಯೋಃ - ಆ ನಿರಂಜನಜಂಗಮದ ಆನಂದದ, ಯಜ್ಞಾಯ-ಪೂಜೆಗೋಸ್ಕರವಾಗಿ, ಯಜ್ಞಪತಯೇ - ಪೂಜೆಯ ಸ್ವಾಮಿಗೋಸ್ಕರವಾಗಿ, ಗಾತುಂ ಗಾತುಂ - ವೈದಿಕ ಲೌಕಿಕಪ್ರಬಂಧಂಗಳಿಂಪಾಡಲ್ ಪಾಡಲ್, ಆ ವೃಣೀಮಹೇ -ಆವರಿಸಿದಪೆವು, ನಃ-ಬ್ರಹ್ಮ ವಿಷ್ಣು ರುದ್ರ ಮಹೇಶ್ವರ ಸದಾಶಿವ ವಿರಾಟ್ಪುರುಷರೆಂಬ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯರಾದ ನಮಗೆ, ದೈವೀಃ ನಿರಂಜನಜಂಗಮ ದೇವಸಂಬಂಧಿಯಾದ, ಸ್ವಸ್ತಿಃ-ಚೈತನ್ಯಸ್ವರೂಪಮಾದ ಮಂಗಲವು, ಅಸ್ತು- ಆಗಲಿ ಮಾನುಷೇಭ್ಯಃ - ಎಮ್ಮಿಂದಾದ ಮನುಮುಂ, ಸ್ವಸ್ತಿಃ - ನಿರಂಜನಜಂಗಮ ಚೈತನ್ಯಸ್ವರೂಪ ಮಂಗಳವು, ಅಸ್ತು-ಆಗಲಿ, ಭೇಷಜಂ - ಭವರೋಗವೈದ್ಯನಾದ, ಊರ್ಧ್ವಂ-ಸಕಲತತ್ವೋಪರಿಭೂತನಿರಂಜನಜಂಗಮವು, ಜಿಗಾತು-ನಮ್ಮ ಸತ್ಕ್ರಿಯೆಯ್ದಲಿ, ದ್ವಿಪದೇ-ಎರಡು ಪಾದಂಗಳುಳ್ಳ, ನಃ-ನಮಗೆ, ಚತುಷ್ಪದೇ-ಪಶುಗಳ್ಗಂ, ಶಂ-ಅಖಂಡಾನಂದವುಂ, ಶಂ-ಮುಕ್ತಿಯುಂ ಅಸ್ತು-ಆಗಲಿ.

- ಓಂ ಶಾಂತಿಶ್ಶಾಂತಿಸರ್ವೇಶಾಂತಿರಸ್ತು -

ಟೀ॥ ಓಂ ಶಾಂತಿಃ-ನಿರಂಜನಜಂಗಮದ ಕಾರುಣ್ಯವೂ, ಅಸ್ತು-ಆಗಲಿ, ಶಾಂತಿಃ-ಸಾಕಾರಜಂಗಮದ ಕಾರುಣ್ಯವುಂ,ಅಸ್ತು-ಆಗಲಿ, ಸರ್ವಶಾಂತಿಃ - ಸದಾಶಿವನ ಸದ್ಯೋಜಾತ ವಾಮದೇವಾಘೋರ ತತ್ಪುರುಷಮುಖಂಗಳ ಭೂತಿ ಭಸಿತ ಭಸ್ಮ ಕ್ಷಾರಂಗಳಹಕ್ಕಳೆಗಳಿಂಪುಟ್ಟಿದ ಘಂಟಾಕರ್ನ ಗಜಕರ್ಣ ದಾರುಕ ರೇಣುಕರಗೋತ್ರಂಗಳ ಋಗ್ಯಜುರಥರ್ವ ಸಾಮಶಾಖಾಧ್ಯಯನರ ವೀರಶೈವತಂತ್ರ ವೀರಮಾಹೇಶ್ವರ ತಂತ್ರ ಪರಮರಹಸ್ಯ ತಂತ್ರ ಶಿವರಹಸ್ಯ ತಂತ್ರಸೂತ್ರಂಗಳ ಏಕೋರಾಮ ಪಂಡಿತ ಮರುಳಸಿದ್ಧ ರೇವಣಸಿದ್ಧಪ್ರವರಂಗಳ ವಿರಕ್ತಾರಾಧ್ಯಾತಿಥಿಘನಲಿಂಗರ ಕಾರುಣ್ಯವುಂ, ಅಸ್ತು-ಆಗಲಿ.

ಇತಿ ಸಹ್ಯಾದ್ರಿ ಕೆಳದೀ ಷಡ್ದೇಶಕುಂಟಿಕಾಪುರಸ್ಯ ಕಾಶೀಕಾಂಡ ಚನ್ನವಿರಮಾಹೇಶ್ವರೇಣ ಕೃತಾಪುರುಷಸೂಕ್ತಸ್ಯ ಟೀಕಾಸಮಾಪ್ತಾ.

ವರದಿ

# ಪಂಡಿತ ಚೆನ್ನಪ್ಪ ಎರೇಸೀಮೆಯವರ ಬದುಕು-ಬರಹ ಕುರಿತ ಒಂದು ದಿನದ ವಿಚಾರ ಸಂಕಿರಣ



**ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ವಿಚಾರ ಸಂಕಿರಣದ ಉದ್ಘಾಟನೆ**

ನಾಡಿನ ಪ್ರಸಿದ್ಧ ವಿದ್ವಾಂಸರೂ, ವಾಗ್ಮಿಗಳೂ, ಕನ್ನಡ ನಾಡು-ನುಡಿ-ಸಂಸ್ಕೃತಿಯ ಬಗ್ಗೆ ಅಪಾರವಾದ ಅಭಿಮಾನ, ಕಾಳಜಿ, ಬದ್ಧತೆಯನ್ನು ಹೊಂದಿದ್ದ ಪಂಡಿತ ಚೆನ್ನಪ್ಪ ಎರೇಸೀಮೆಯವರ ಬದುಕು-ಬರಹವನ್ನು ಕುರಿತ ಒಂದು ದಿನದ ವಿಚಾರ ಸಂಕಿರಣವನ್ನು ಡಿಸೆಂಬರ್ ೨೯, ೨೦೧೯ ರಂದು ಶ್ರೀ ಸಿದ್ಧಗಂಗಾ ಮಠದಲ್ಲಿ ಆಯೋಜಿಸಲಾಗಿತ್ತು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆದ ವಿಚಾರ ಸಂಕಿರಣವನ್ನು ಹಿರಿಯ ವಿದ್ವಾಂಸರಾದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಅವರು ಈ ಸಂದರ್ಭದಲ್ಲಿ ಮಾತನಾಡಿ “ಬಡತನ, ಸಿರಿತನ ಕೊನೆಯವರೆಗೂ ಉಳಿಯುವುದಿಲ್ಲ. ಅಪಾರವಾದ ಸಂಕಲ್ಪಸಿದ್ಧಿ ಇದ್ದುದರಿಂದ ಮುಲ್ಕಿ ಪರೀಕ್ಷೆಯಲ್ಲಿ ೨೨ನೇ ರ್‍ಯಾಂಕ್ ಪಡೆದರು. ಸತತವಾದ ಪರಿಶ್ರಮದಿಂದ ಸಾಧನೆ ಮಾಡಿದರು. ಅವರ ಸಾಧನೆಯ ಬೆಳವಣಿಗೆ ಮಹತ್ತರವಾದುದು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಅಂತರಂಗದ ಶಿಷ್ಯರಾಗಿದ್ದರು. ಎರೇಸೀಮೆಯವರ ಪಾಂಡಿತ್ಯ ಅಸಾಧಾರಣವಾದುದು. ಅವರ ನೆನಪಿನ ಶಕ್ತಿ ಅದ್ಭುತವಾಗಿತ್ತು. ಅರವತ್ತು ವರ್ಷಗಳ ಕಾಲ ಮಠದೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡಿದ್ದರು. ಶ್ರೀಮಠ ಹಿಂದಿನಿಂದಲೂ ಪ್ರತಿಭೆಗಳನ್ನು ಗುರುತಿಸುತ್ತಾ ಬಂದಿದೆ. ಅವರ ಸಂಪಾದಕತ್ವದಲ್ಲಿ ಹೊರತಂದ 'ಸಿದ್ಧಗಂಗಾಶ್ರೀ' ಶ್ರೀಮಠದ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಅವರ ಪರಿಶ್ರಮ ಅಪಾರವಾದುದು. ಈ ಗ್ರಂಥವನ್ನು ಮರುಮುದ್ರಣ ಮಾಡುವ ಅವಶ್ಯಕತೆಯಿದೆ” ಎಂದು ಹೇಳಿದರು. ಇದೇ ಸಂದರ್ಭದಲ್ಲಿ ಹೀ.ಚಿ. ಶಾಂತವೀರಯ್ಯ ಅವರ ಸಂಪಾದಕತ್ವದಲ್ಲಿ ಹೊರತಂದ ಸ್ಮರಣ ಸಂಚಿಕೆಯನ್ನು ಪರಮಪೂಜ್ಯ ಶ್ರೀಗಳವರು ಲೋಕಾರ್ಪಣೆ ಮಾಡಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಹಿರಿಯ ಜಾನಪದ ವಿದ್ವಾಂಸರು, ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ ಆದ ಡಾ. ಗೊ.ರು. ಚನ್ನಬಸಪ್ಪ ಅವರು ಮಾತನಾಡಿ “ ಶತಮಾನೋತ್ಸವ ಸಂದರ್ಭದಲ್ಲಿ ಲೋಕಾರ್ಪಣೆಯಾದ ಪಂ. ಎರೇಸೀಮೆಯವರ 'ನನ್ನ ಕಥೆ' ಕೃತಿಯ ಬಗ್ಗೆ ಪ್ರಸ್ತಾಪಿಸಿ ಅವರ ಈ ಕೃತಿಯನ್ನು ಎಲ್ಲರೂ ಓದಬೇಕೆಂದು ಸಲಹೆ ಮಾಡಿದರು. ಅವರು ಕತೆ ಹೇಳುವಾಗ ಮಗುವಿನಂತೆ ಮುಗ್ಧರಾಗುತ್ತಾರೆ. ಭಾವಪರವಶರಾಗುತ್ತಾರೆ. ಆಶಾವಾದಿಗಳಾಗುತ್ತಾರೆ, ನಿರಾಶಾವಾದಿಗಳಾಗುತ್ತಾರೆ. ಸರಳವಾದ ನಿರೂಪಣೆಯಿಂದ ಕೂಡಿದ ಈ ಕೃತಿ ಓದಿಸಿಕೊಂಡು ಹೋಗುತ್ತದೆ. ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಕೃಪೆಗೆ ಪಾತ್ರರಾಗಿದ್ದರು. ಅವರಿಗೆ ಸಿದ್ಧಗಂಗಾ ಕ್ಷೇತ್ರ ಜನ್ಮಭೂಮಿ ಇದ್ದಂತೆ ಇತ್ತು” ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘದ ಪ್ರಧಾನ ಕಾರ್ಯದರ್ಶಿಗಳೂ, ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ನಿರ್ದೇಶಕರೂ ಆದ ಡಾ. ಎಂ.ಎನ್. ಚನ್ನಬಸಪ್ಪನವರು ಮಾತನಾಡಿ “ಪಂ. ಚೆನ್ನಪ್ಪ ಎರೇಸೀಮೆಯವರು ಶ್ರೀಮಠದ ಸೇವೆ ಹಾಗೂ ಶ್ರೀಮಠದ ಕಾರ್ಯಗಳಿಗೆ ಪ್ರೋತ್ಸಾಹ, ಸಹಕಾರ ನೀಡುತ್ತಿದ್ದುದನ್ನು ಸ್ಮರಿಸಿಕೊಂಡರು. 'ನನ್ನ ಕಥೆ' ಓದುವಾಗ ಖುಷಿಯಾಯಿತು. ತುಂಬಾ ಸೊಗಸಾದ ಬರವಣಿಗೆ” ಎಂದು ಪ್ರಶಂಸಿಸಿದರು.





**ಸಮಾರೋಪ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಆಶೀರ್ವಚನ**

ದಿವ್ಯಸಾನ್ನಿಧ್ಯವನ್ನು ವಹಿಸಿದ್ದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಶಿವನುಡಿಗಳಲ್ಲಿ “ಎರೇಸೀಮೆಯವರಿಗೂ ಶ್ರೀಮಠಕ್ಕೂ ಇದ್ದ ಅವಿನಾಭಾವ ಸಂಬಂಧವನ್ನು ಅಳೆಯಲು ಸಾಧ್ಯವಿಲ್ಲ. ಅವರು ಸಾಹಿತ್ಯಿಕವಾಗಿ ಮಾಡಿದ ಸೇವೆ ಅನುಪಮವಾದುದು. ಅವರು ಶ್ರೀಮಠಕ್ಕೆ ಸಲ್ಲಿಸಿರುವ ಸೇವೆಯನ್ನು ಎಂದೂ ಮರೆಯಲಾಗದು. ಅವರನ್ನು ಮುಂದಿನ ಪೀಳಿಗೆಗೂ ಪರಿಚಯಿಸುವ ಕೆಲಸವಾಗಬೇಕು. ಅವರು ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕವಾಗಿ ಕೊಟ್ಟಿರುವ ಕೊಡುಗೆಯಿಂದ ನಮ್ಮ ನಡುವೆ ಅಜರಾಮರಾಗಿದ್ದಾರೆ. ಶ್ರೀಮಠದ ಗುರುಪರಂಪರೆಯ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಭದ್ರಬುನಾದಿಯನ್ನು ಹಾಕಿಕೊಟ್ಟರು. ಅವರು ಪ್ರೊ. ಟಿ.ಆರ್. ಮಹಾದೇವಯ್ಯನವರೊಂದಿಗೆ ಸಂಪಾದಿಸಿಕೊಟ್ಟ 'ಸಿದ್ಧಗಂಗಾಶ್ರೀ' ಗ್ರಂಥವನ್ನು ಮರುಮುದ್ರಣ ಮಾಡಲಾಗುವುದು” ಎಂದು ಹೇಳಿದರು.

ಸಮಾರಂಭದಲ್ಲಿ ಪಂಡಿತ ಚೆನ್ನಪ್ಪ ಎರೇಸೀಮೆಯವರ ಕುಟುಂಬದವರು ಭಾಗವಹಿಸಿದ್ದರು. ಕಾರ್ಯಕ್ರಮ ಶ್ರೀಮತಿ ಲಕ್ಷ್ಮೀ ಜಯಪ್ರಕಾಶ್ ಅವರಿಂದ ಪ್ರಾರಂಭವಾಯಿತು. ಶ್ರೀ ಕುಮಾರಸ್ವಾಮಿಯವರು ಸ್ವಾಗತಿಸಿದರು. ಶ್ರೀ ಕೋ.ರಂ. ಬಸವರಾಜು ಅವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಅಂದು ಬೆಳಿಗ್ಗೆ ವಿಧಿವಶರಾದ ಪೇಜಾವರದ ಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರಿಗೆ ಶ್ರದ್ಧಾಂಜಲಿಯನ್ನು ಸಲ್ಲಿಸಲಾಯಿತು. ಶ್ರೀಮತಿ ಲೋಕೇಶ್ವರಿ ಪ್ರಭು ಅವರು ಕಾರ್ಯಕ್ರಮವನ್ನು ನಿರೂಪಿಸಿದರು. ವಿದ್ವಾನ ಶ್ರೀ ಎಂ.ಜಿ. ಸಿದ್ಧರಾಮಯ್ಯನವರು ಶರಣು ಸಮರ್ಪಣೆ ಮಾಡಿದರು.

ವಿಚಾರ ಸಂಕಿರಣದ ಪ್ರಥಮ ಗೋಷ್ಠಿಯಲ್ಲಿ **'ಎರೇಸೀಮೆಯವರ ಅನುವಾದಿತ ಕೃತಿಗಳು'** ವಿಷಯವನ್ನು ಕುರಿತು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿಗಳಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು 'ಎರೇಸೀಮೆಯವರ ಸ್ವತಂತ್ರ ಕೃತಿ'ಗಳನ್ನು ಕುರಿತು ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಪ್ರಬಂಧ ಮಂಡಿಸಿದರು.

ಎರಡನೇ ಗೋಷ್ಠಿಯಲ್ಲಿ **'ಎರೇಸೀಮೆಯವರ ಸಂಪಾದಿತ ಕೃತಿಗಳು'** ವಿಷಯವನ್ನು ಕುರಿತು ಸಂಶೋಧಕರಾದ ಡಾ. ಬಿ. ನಂಜುಂಡಸ್ವಾಮಿಯವರ **'ಪತ್ರಿಕೆ ಸಂಪಾದಕರಾಗಿ ಎರೇಸೀಮೆಯವರು'**, ವಿಷಯವನ್ನು ಕುರಿತು ಸಿದ್ಧಗಂಗಾ ಮಾಸಪತ್ರಿಕೆಯ ಪ್ರಧಾನ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು, **'ಶಿಕ್ಷಣತಜ್ಞರಾಗಿ ಎರೇಸೀಮೆಯವರು'** ವಿಷಯವನ್ನು ಕುರಿತು ಡಾ. ಸಿ.ಕೆ. ಜಗದೀಶ ಅವರು ಪ್ರಬಂಧಗಳನ್ನು ಮಂಡಿಸಿದರು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆದ ಸಮಾರೋಪದ ಅಧ್ಯಕ್ಷತೆಯನ್ನು ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ನಿವೃತ್ತ ಐ.ಎ.ಎಸ್. ಅಧಿಕಾರಿಗಳಾದ ಡಾ. ಸಿ. ಸೋಮಶೇಖರ್ ಅವರು ಭಾಗವಹಿಸಿದ್ದರು. ಲೇಖಕರಾದ ಶ್ರೀ ಎಸ್. ಫ್ಲೋಮಿನ್ ಸಮಾರೋಪ ನುಡಿಗಳನ್ನಾಡಿದರು. ಇವರೆಲ್ಲರೂ ಪಂಡಿತ ಚನ್ನಪ್ಪ ಎರೇಸೀಮೆಯವರ ವಿದ್ವತ್, ಸರಳ ವ್ಯಕ್ತಿತ್ವವನ್ನು ಪ್ರಶಂಸಿಸಿದರು.

ಸಮಾರಂಭದಲ್ಲಿ ಪಂ. ಶ್ರೀ ವಿರೂಪಾಕ್ಷಪ್ಪ ಎರೇಸೀಮೆ, ಡಾ. ವೈ. ತುಳಜಪ್ಪ, ಡಾ. ರಾಜಶೇಖರ್, ಶ್ರೀ ಅಬ್ದುಲ್ ಹಮೀದ್, ಪಂ. ಎಂ. ಈಶ್ವರಪ್ಪ ಅವರು ಉಪಸ್ಥಿತರಿದ್ದರು. ಕಾರ್ಯಕ್ರಮದ ನಿರೂಪಣೆಯನ್ನು ಶ್ರೀ ಡಿ.ಎನ್. ನಾಗರಾಜು, ಶರಣು ಸಮರ್ಪಣೆಯನ್ನು ಶ್ರೀ ಶಿವಕುಮಾರ ಎರೇಸೀಮೆಯವರು ನಡೆಸಿಕೊಟ್ಟರು. ಸಂಜೆ ಕಾರ್ಯಕ್ರಮದ ಅಂಗವಾಗಿ ಡಾ. ಲಕ್ಷ್ಮಣದಾಸ್ ಅವರು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳ ಪುಣ್ಯಕಥಾ ಕೀರ್ತನೆಯನ್ನು ನಡೆಸಿಕೊಟ್ಟರು.

**– ವರದಿ ಎಚ್.ಎಸ್.ಎಸ್.**

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102

RNI No. 17139/69



To

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10, Ph : 23404232

email ID : geetanjaligraphics@gmail.com